



ಕಾಯಕವೇ ಕೈಲಾಸ

# ಸಿದ್ಧಗಂಗಾ

ಸಂಪುಟ : ೪೫ ಅಕ್ಟೋಬರ್ ೨೦೦೮ ಸಂಚಿಕೆ : ೧೦



ತುಮಕೂರು ಸಮೀಪದಲ್ಲಿರುವ ಬೆಳ್ಳಾವೆಯ ಶ್ರೀಕಾರ ಮಠದ ನೂತನ ಶ್ರೀಗಳ ಪಟ್ಟಾಧಿಕಾರ ಮಹೋತ್ಸವವನ್ನು ಪರಮಪೂಜ್ಯ ಶ್ರೀ ಶ್ರೀಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಪೂಜ್ಯ ಶ್ರೀ ಶ್ರೀ ಅಟವೀ ಶಿವಲಿಂಗಸ್ವಾಮಿಗಳು, ನೂತನ ಶ್ರೀಗಳಾದ ಶ್ರೀ ವೀರಬಸವ ದೇವರು ಹಾಗೂ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು



ತುಮಕೂರಿನ ಗಾಂಧಿನಗರದಲ್ಲಿ ನೂತನವಾಗಿ ನಿರ್ಮಿಸಿರುವ "ಮಹೇಶ್ ಕೀಲು ಮತ್ತು ಮೂಳೆ ಕ್ಲಿನಿಕ್"ನ್ನು ಶ್ರೀಗಳು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್, ಮೂಳೆತಜ್ಞ ಡಾ. ಮಹೇಶ್ ಮತ್ತು ಅರ್ಚನಾ ಮಹೇಶ್ ಅವರು ಉಪಸ್ಥಿತರಿದ್ದರು



ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮ ದರ್ಜೆ ಕಾಲೇಜಿನ ಪ್ರಸಕ್ತ ಸಾಲಿನ ಚಟುವಟಿಕೆಗಳ ಉದ್ಘಾಟನೆ ಮತ್ತು ಪ್ರಥಮ ಪದವಿ ವಿದ್ಯಾರ್ಥಿನಿಯರ ಸ್ವಾಗತ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಜಾನಪದ ಅಕಾಡೆಮಿ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರು ಉದ್ಘಾಟಿಸಿದರು

 ಅಂತರಂಗ


ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೫ ಅಕ್ಟೋಬರ್ ೨೦೦೯ ಸಂಚಿಕೆ : ೧೦

## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

ದೂರ್ವಿಯ ದಳವ ಮೇಯ ಬಂದ ಮೊಲನ
ಉರ್ವಿಯ ಕರಡಿ ತೊಡರಿಗೊಂಡಿಪ್ಪುದಯ್ಯಾ
ಕರಡಿಯ ಹಿಡಿದ ಬೇಡನ ಕೈಯ್ಯ ಕಾಡನಾಯಿಗಳು
ನಾಡೆಲ್ಲವ ಹರಿದು ತಿನುತಿಪ್ಪವು.
ಇವರ ಘಾತಕವನೇನೆಂಬೆನಯ್ಯಾ
ಇವರ ಘಾತಕ ಗಮಕವ ಮುರಿದಾತನಲ್ಲದೆ
ಲಿಂಗೈಕ್ಯನಲ್ಲ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಸಂಚಿತ ಕರ್ಮದಿಂದೆ ಶರೀರಧಾರಿಯಾಗಿ ಜನಿಸಿ, ವಿಷಯ ಪ್ರಪಂಚ ವೆಂಬ ತೃಣವನನುಭವಿಸುವುದಕ್ಕಾಗಮಿಸಿದಾತ್ಮನೆಂಬ ಶಶಕನು ದೇಹ ಸಂಬಂಧಿಯಾದ ವಿದ್ಯಾಶಕ್ತಿಯ ಅಜ್ಞಾನವನು ಪರಿಗ್ರಹಿಸಿಕೊಂಡು, ವೃತ್ತಿಜ್ಞಾನದಲ್ಲಿ ಪ್ರವರ್ತಿಸಲ್ಪಟ್ಟ ಜೀವನೆಂಬ ವ್ಯಾಧನ ಕುಚಿತ್ತ ಸಂಬಂಧವಾದ ಜೀವತ್ರಯಂಗಳ ಪ್ರಪಂಚಿ ನೊಡನೆ ಕೂಡಿ, ಆಣವಾದಿ ಮಲ ತ್ರಯಂಗಳ ಭುಂಜಿ ಸುತ್ತಿರ್ಪವು. ಆ ಕರಣೇಂದ್ರಿಯಂಗಳ ಪ್ರಪಂಚಿನ ಘಾತಕತ್ವದ ಪೀಡನೆಯನು ಸುಜ್ಞಾನೋದಯವಾದ ಶರಣನು ಸದ್ವಿವೇಕ ವಕ್ತ್ರದಿಂದೆ ವಿಚಾರಿಸಿ ಇವರ ಅಜ್ಞಾನ ಪ್ರಪಂಚಿನಿಂದೆ ವಿಲಕ್ಷಣ ನಾಗಬೇಕೆಂದು ಶ್ರೀ ಗುರುದೇವಂಗೆ ಮಾಡುವ ಭಿನ್ನಪ. ಈ ಕರಣೇಂದ್ರಿಯಂಗಳ ವಿಷಯ ಪ್ರಪಂಚದ ಹೊಡೆತದ ವಿಡಾಯದ ಜ್ಞಾನಗುರೂಪದೇಶದನುಜ್ಞೆಯಿಂದೆ ಷಟ್‌ಸ್ಥಲ ಜ್ಞಾನ ಕ್ರಿಯಾಚಾರವಿಡಿದಾಚರಿಸಿ ತನುತ್ರಯ ಸಕಲಕರಣೇಂದ್ರಿಯಂಗಳಲ್ಲಿ ಲಿಂಗವ ಸಂಬಂಧಿಸಿ, ಲಿಂಗಭೋಗೋಪಭೋಗಿ ಯಾಗಿ, ಶರಣಲಿಂಗವೆಂಬ ಭಿನ್ನಭಾವವಳಿದು ಶಿಖಿ ಕರ್ಪೂರ ಸಂಯೋಗದಂತೆ ಏಕತ್ವವನೆಯ್ದಿದಾತನಲ್ಲದೆ ಲಿಂಗೈಕ್ಯ ನಾಗಲರಿಯೆ ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬಸವಣ್ಣಗೆ ಸಮಬರರುಮತ್ತಾರು ಜಗದೊಳಗೆ
ಹೊಸ ಬದುಕ ಕಲಿಸಿದ ದೀವಟಿಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತುಕಲಿತವರೆಲ್ಲ ನಿನ್ನನರಿಯಲಿಲ್ಲ
ಮಾತಿನದ್ವೈತವ ತೋರಿದರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಪಾಪಪುಣ್ಯಗಳೆರಡು ಕೂಡಿ ಒಡಲಾಯಿತು'
ಪಾಪ ಕಳೆದು ಎನ್ನ ನೀನಡೆಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಸೆ ಮಾಯೆಯೆಂಬ ಅಲ್ಲಮನ ನುಡಿ ತಿಳಿಸಿ
ಆಶಾಪಾಶದಿಂದ ಬಿಡಿಸಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತುತ್ತಾಗಿ ಮೃತ್ಯುವಿಗೆ ಬತ್ತಿ ಹೋಗದ ಮುನ್ನ
ಎತ್ತಿ ಕೈಹಿಡಿದು ಉದ್ಧರಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಮುಂದುಜಾವದೊಳೆದ್ದುಲಿಂಗಪೂಜೆಯಮಾಡಿ'
ಮಂದಿ ಬದುಕಿಗಾಗಿ ಧಾವಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕದುನ್ನತಿಗಾಗಿ ಹಗಲಿರುಳು ನೀದುಡಿದೆ
ನಿನ್ನ ಒಳಿತಿಗಾಗಿ ದುಡಿಯೆವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರಸವುಂಡ ಹೊನ್ನಾದೆ ಬಸವತೀರ್ಥದಿ ಮಿಂದು
ಅಸಮಗುರು ಉದ್ಧಾನಕರುಣದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರ್ಪೂರಕಾಯದೊಳು ಆತ್ಮಲಿಂಗವನಿರಿಸಿ
ಜಗವಜಾಗರಗೊಳಿಪ ಮಹಿಮನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಬ್ಬಿನ ಜಲ್ಲೆಯಾದೆ ಕಂದಸಾವಿರಗಳಿಗೆ
ಹಬ್ಬ ಮಾಡುಣಿಸಿದೆ ಅನುದಿನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಋಣಪರಿಹಾರಮಾರ್ಗ

ನಮ್ಮ ಗುರುಗಳು ಶ್ರೀಮಠಕ್ಕೆ ಬರುತ್ತಿದ್ದ ಭಕ್ತಾಧಿಗಳಿಗೆ ಸಣ್ಣಪುಟ್ಟ ಕೆಲಸಗಳನ್ನು ಹೇಳಿ ಮಾಡಿಸುತ್ತಿದ್ದರು. ಕೆಲವು ಭಕ್ತರು ಸಂತೋಷದಿಂದ ಹೇಳಿದ ಕೆಲಸಗಳನ್ನು ಮಾಡುತ್ತಿದ್ದರು. ಮತ್ತೆ ಕೆಲವರು ಒಲ್ಲದ ಮನಸ್ಸಿನಿಂದ ಮಾಡಬೇಕಲ್ಲಾ ಎಂದು ಅರೆಮನಸ್ಕತೆಯಿಂದ ಮಾಡುತ್ತಿದ್ದರು. ನಮಗೆ ಇದೊಂದು ಅರ್ಥವಾಗದ ಪ್ರಸಂಗ ವಾಗಿಯೇ ಉಳಿದು ಬಂದಿತು. ಬಹಳ ಬಹಳ ದಿನಗಳಿಂದ ಗುರುಗಳನ್ನೇ ಕೇಳ ಬೇಕೆಂದುಕೊಂಡು ದಿನ ತಳ್ಳುತ್ತಲೇ ಬಂದೆವು. ಮನಸ್ಸನ್ನು ಗಟ್ಟಿಮಾಡಿಕೊಂಡು ಒಂದು ದಿನ ಕೇಳಿಯೇ ಬಿಟ್ಟೆವು. ಗುರುಗಳು ಹೇಳಿದ ಮಾತುಗಳನ್ನು ಕೇಳಿದ ನಮಗೆ ಜೀವನದ ರಹಸ್ಯವೊಂದರ ಪರಿಚಯವಾಯಿತು. 'ಸ್ವಾಮಿಗಳೇ, ನೋಡಿ ಮಠಕ್ಕೆ ನೂರಾರು ಜನ ಬರುತ್ತಾರೆ. ಬರುವವರು ಕೈಯ್ಯಲ್ಲಿ ಏನನ್ನಾದರೂ ತಂದು ಅರ್ಪಿಸುತ್ತಾರೆ. ಕೆಲವರು ಬರೀ ಕೈಯ್ಯಲ್ಲಿ ಬರುವವರೂ ಇರುತ್ತಾರೆ. ಅವರಿಗೆ ಶ್ರೀಮಠಕ್ಕೆ ಕೊಡಬಾರದೆಂಬ ಮನಸ್ಸೇನೂ ಅಲ್ಲ. ಆದರೆ ಬರುವ ಸಂದರ್ಭ ಹಾಗೆ ಬಂದಿರುತ್ತದೆ. ಅವರೂ ಪ್ರಸಾದ ಸ್ವೀಕರಿಸುತ್ತಾರೆ. ಭಕ್ತಿಯಿಂದ ತಂದುಕೊಟ್ಟವರ ಋಣ ಅವರ ಮೇಲಾಗುತ್ತದೆ. ಯಾರೂ ಯಾರ ಋಣವನ್ನೂ ಹೊತ್ತು ಹೋಗು ವಂತಾಗಬಾರದು. ಅದಕ್ಕಾಗಿಯೇ ಬಂದ ಭಕ್ತಾದಿಗಳಿಗೆ ಚಿಕ್ಕ ಪುಟ್ಟ ಸೇವಾ ಕಾರ್ಯ ಗಳನ್ನು ಮಾಡುವಂತೆ ಹೇಳಬೇಕಾಗುತ್ತದೆ. ಅದರಿಂದಾಗಿ ಅವರ ಮೇಲೆ ಋಣ ಭಾರ ಬಂದಂತಾಗುವುದಿಲ್ಲ. ತಮಗೆ ನೀರು ಗೊಬ್ಬರವನ್ನು ಹಾಕಿ ಬೆಳೆಸಿದ ಮರಗಳೇ ಹೂವು, ಹಣ್ಣು, ನೆರಳು ನೀಡಿ ಋಣ ಭಾರಮುಕ್ತವಾಗುತ್ತಿರುವಾಗ ಮನುಷ್ಯರಾದವರು ಆ ಮರಗಳಿಗಿಂತ ಕಡೆಯಾಗಬಾರದು'– ಎಂಬುದಾಗಿ ಹೇಳಿದರು. ಜೀವನ ಮೌಲ್ಯಗಳನ್ನು ಸಂರಕ್ಷಿಸುವ ಮಾರ್ಗವನ್ನು ಗುರುಗಳು ಹೇಳಿ ನಮ್ಮ ಕಣ್ಣು ತೆರೆಸಿದರು. ಹಾಗೆಯೇ ಯಾರೂ ಯಾರ ಋಣವನ್ನು ಹೊತ್ತು ಹೋಗಬಾರದು.

*

## ಸಂಪಾದಕೀಯ

# ಗಾಂಧಿ ಜಯಂತಿ

ಭಾರತ ದೇಶದ ಅಮೃತಫಲ. ಮಾನವೀಯತೆಯ ಮಂಗಳಶಕ್ತಿ. ಸ್ವಾಭಿಮಾನದ ಪುಣ್ಯರೂಪ. ಸತ್ಯಾಗ್ರಹದ ಸೂತ್ರದಾರ. ಅಹಿಂಸೆಯ ಅವತಾರ ಪುರುಷ, ದಲಿತರ ದಯಾಳು, ದೀನರ ದೀಪಕ. ಅಭೂಷಣ ವಸ್ತ್ರಧಾರಿ, ಸರಳತೆಯ ಸಾಕಾರಮೂರ್ತಿ. ದೈವಭಕ್ತಿಯ ಹರಿಕಾರ. ಸ್ವಾತಂತ್ರ್ಯವನ್ನು ತಂದುಕೊಟ್ಟ ಮಹಾನುಭಾವ, ಮಹಾತ್ಮ ಗಾಂಧೀಜಿ ಲೋಕ ಕಂಡ ವಿಸ್ಮಯಗಳಲ್ಲಿ ಮರೆಯಲಾಗದ್ದು. ಅವರ ನೆನಪೇ ಒಂದು ಮೌಲ್ಯದೀಪ ಅನುಭಾವಿ ಮಹಾತ್ಮಾಗಾಂಧೀಜಿಯವರು ಬೆಳಗಾಂನಲ್ಲಿ 1924ರಲ್ಲಿ ಕಾಂಗ್ರೆಸ್ ಅಧಿವೇಶನಕ್ಕೆ ಬಂದಿದ್ದಾಗ ಯಾರೋ ಒಬ್ಬರು ಮಹಾತ್ಮಾ ಗಾಂಧೀಜಿಯವರೇ ನೀವು ಜೋಗದ ಜಲಪಾತವನ್ನು ನೋಡಬೇಕು ಎಂದರಂತೆ. ಅದಕ್ಕೆ ಗಾಂಧೀಜಿ ಹೇಳಿದರಂತೆ ನಾನು ಅದಕ್ಕಿಂತಲೂ ದೊಡ್ಡ ಜಲಪಾತವನ್ನು ನೋಡಿದ್ದೇನೆ ಎಂಬುದಾಗಿ. ಅದಕ್ಕೆ ಹಾಗೆ ಹೇಳಿದವರು ಕೇಳಿದರಂತೆ 'ಎಲ್ಲಿ ಗಾಂಧೀಜಿ? ಎಲ್ಲಿದೆ ಅಂಥ ದೊಡ್ಡ ಜಲಪಾತ ಎಂದು? ಕುತೂಹಲ ವ್ಯಕ್ತಪಡಿಸಿದರಂತೆ. 'ಇಲ್ಲೇ ನಿಮ್ಮೂರಿನಲ್ಲೇ, ಬೆಳಗಾಂನಲ್ಲೇ ಎಂದರಂತೆ. ಪ್ರಶ್ನಿಸಿದವರು ಇನ್ನೂ ಕುತೂಹಲಿತರಾಗಿ 'ಇದೇನು ಮಹಾತ್ಮಾಜಿ ನಾವು ಕಾಣದ ದೊಡ್ಡ ಜಲಪಾತ ಇಲ್ಲೆಲ್ಲಿದೆ? ಎಂದರೆ ಮಹಾತ್ಮಾಜಿ ಆಕಾಶದಿಂದ ಬೀಳುತ್ತದಲ್ಲ ಮಳೆ ಅದಕ್ಕಿಂತಲೂ ದೊಡ್ಡ ಜಲಪಾತ ಯಾವುದಿದೆ ಎಂದರಂತೆ. (ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರು ತರಗತಿಯಲ್ಲಿ ಹೇಳಿದ್ದ ಒಂದು ನೆನಪು) ಆದರೆ, ಗಾಂಧೀಜಿಯನ್ನು ಅಂದು ಒಬ್ಬ ದುರ್ಮನದ ವಿಕಾರಿ ಹತ್ಯೆಗೈದ. ಅವನು ಹತ್ಯೆ ಮಾಡಿದ್ದು ಅವರ ಭೌತದೇಹವನ್ನು. ಇಂದು ನಾವು ಭಾರತೀಯರು ಹೆಜ್ಜೆ ಹೆಜ್ಜೆಗೆ ನಿಮಿಷನಿಮಿಷಾರ್ಧದಲ್ಲಿಯೂ ಅವರನ್ನು ಹತ್ಯೆಮಾಡುತ್ತಲೇ ಇದ್ದೇವೆ. ಅದರಲ್ಲೂ ನಮ್ಮನ್ನಾಳುತ್ತಿರುವವರು ಎಗ್ಗುಸಿಗ್ಗಿಲ್ಲದೆ ಗಾಂಧೀಜಿಯವರು ಬಿತ್ತಿ ಬೆಳೆಸಿದ ಮೌಲ್ಯಗಳನ್ನು ಗಾಳಿಗೆ ತೂರುತ್ತಿದ್ದಾರೆ. ಗಾಂಧೀಜಿಯ ಚಿತ್ರಪಟಗಳನ್ನು ಅನಾವರಣ ಮಾಡುತ್ತಾರೆ. ಮಾಲೆ ಹಾಕುತ್ತಾರೆ, ಗಂಧದ ಕಡ್ಡಿ ಹೊಚ್ಚುತ್ತಾರೆ, ದೀಪ ಬೆಳಗುತ್ತಾರೆ. ಇದನ್ನು ಕಂಡು ನೊಂದು ಕವಿ ಜಿ.ಎಸ್.ಎಸ್. ಹೇಳುವುದೇನು? 'ಅನಾವರಣ ವಾಯಿತಂತೆ ಗಾಂಧೀಜಿಯ ಚಿತ್ರಕೆ, ಸತ್ತ ಗಾಂಧಿ ಅತ್ತನೇನೋ ನಡೆದ ಈ ವಿಚಿತ್ರಕೆ'– ಎಂಬ ಕಟುಸತ್ಯವನ್ನು 'ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ' ಎಂದು ಆಶಿಸುತ್ತಾರೆ. ಹೌದಲ್ಲವೆ? ಅನಾವರಣವಾಗಬೇಕಾದುದು ಚಿತ್ರಪಟಕ್ಕಲ್ಲ. ಗಾಂಧೀಜಿಯ ಹೆಸರಿನಲ್ಲಿ ಎಲ್ಲ ಅವಗುಣಗಳ ತವನಿಧಿಯಾಗಿರುವ ನಮ್ಮ ಜೀವನ ಶೈಲಿಗೆ. ಗಾಂಧೀ ಜಯಂತಿಯಂದು ನಾವೆಲ್ಲ ಅನಾವರಣಮಾಡಿಕೊಳ್ಳೋಣವೇ?

* * *

ನಾಡಿನ ಬಹುದೊಡ್ಡ ಹಬ್ಬ ನವರಾತ್ರಿ. ಒಂಬತ್ತು ದಿನಗಳ ಸಂಭ್ರಮ ಸಡಗರಗಳ ಹಬ್ಬ. ಹಳ್ಳಿ ದಿಲ್ಲಿಗಳೆನ್ನದೆ ಉಂಡುಟ್ಟು ನಲಿಯುವ ಸಂದರ್ಭ. ಅಸುರೀಶಕ್ತಿಗಳ ಮೇಲೆ ಧಾಳಿ ಮಾಡುವ ಶಕ್ತಿಯಾರಾಧನೆಯ ಹಬ್ಬ. ವಿಜಯವನ್ನು ಸಾಧಿಸುವ ವಿಜಯದಶಮೀ–ದಸರಾ ಹಬ್ಬ. ಶ್ರೀಮಠದಲ್ಲಿಯೂ ಅಧಿದೇವರಾದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯನ್ನು ವಿಧ್ಯುಕ್ತವಾಗಿ ಒಂಬತ್ತು ದಿನಗಳುದ್ದಕ್ಕೂ ಪೂಜಿಸುವ ಹಬ್ಬ. ರಾಷ್ಟ್ರಪತಿಗಳಿಗೆ, ರಾಜ್ಯಪಾಲರಿಗೆ, ಸರ್ವಜನಕ್ಕೆ ಕಲ್ಯಾಣವಾಗಲಿ ಎಂದು ಹಾರೈಸುವ ಹಬ್ಬದ ಆಚರಣೆ. 102ರ ತಪಸ್ವಿ ಪರಮಪೂಜ್ಯ ಶ್ರೀ ಶ್ರೀಗಳವರ ನೇತೃತ್ವದಲ್ಲಿ 19–09–2009ರಿಂದ 29–09–2009ರವರೆಗೆ ಸಾಂಗೋಪಾಂಗವಾಗಿ ನಡೆಯುತ್ತಿರುವ 'ಮಹಾನವಮಿ–ದಸರಾ' ಹಬ್ಬಕ್ಕೆ 'ಸಿದ್ಧಗಂಗಾ' ಭಕ್ತಿನಮನಗಳನ್ನು ಸಮರ್ಪಿಸುತ್ತದೆ.

–ಸಂಪಾದಕ



## ವೈಚಾರಿಕ

# ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

–ಪ್ರೊ. ಡಿ. ಜವರೇಗೌಡ, ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ವೈಜ್ಞಾನಿಕ ಯುಗದಲ್ಲಿಯೂ ಹನ್ನೆರಡನೆಯ ಶತಮಾನದ ಧಾರ್ಮಿಕ ಕ್ರಾಂತಿ ಸರ್ವಮಾನ್ಯವಾಗುವುದರಲ್ಲಿ ಸಂದೇಶವಿಲ್ಲ. ನೂತನ ವೈಜ್ಞಾನಿಕ ಧರ್ಮದ ತಳಹದಿಯ ಮೇಲೆ ಸಾಮಾಜಿಕ ಕ್ರಾಂತಿಯ ಬಳ್ಳಿಯನ್ನು ವಚನಕಾರರು ಹಬ್ಬಿಸುತ್ತಾರೆ. ಧರ್ಮಾಧಾರಿತವಲ್ಲದ ಯಾವ ಕ್ರಾಂತಿಯೇ ಆಗಲಿ ಸಂಪೂರ್ಣ ಯಶಸ್ವಿಯಾಗಲಾರದೆಂಬುದು ಪ್ರವಾದಿಗಳ ಸಿದ್ಧವಾಣಿ. ಬಸವಣ್ಣನವರ ಕಾಲಕ್ಕೆ ಇಡೀ ಸಮಾಜ ಕುಟ್ಟೆ ಹಿಡಿದ ಮರದಂತೆ, ತುಕ್ಕು ಹತ್ತಿದ ಉಕ್ಕಿನಂತೆ, ರೋಗರುಜಿನಗಳು ತಗುಲಿದ ದೇಹದಂತೆ ತತ್ತರಿಸುತ್ತದೆ. ಪುರೋಹಿತಶಾಹಿ ಅರಸೊತ್ತಿಗೆಗಳು ಜಾತೀಯತೆ ಅಸ್ಪೃಶ್ಯತೆಗಳ ಸಾಂಕ್ರಾಮಿಕ ರೋಗಗಳನ್ನು ಸಮಾಜದಲ್ಲಿ ಹರಡುತ್ತ, ಅಜ್ಞಾನ ಮೌಢ್ಯಗಳನ್ನು ರಾಶಿ ರಾಶಿಯಾಗಿ ಬಿತ್ತುತ್ತ, ಅವುಗಳ ಲಾಭವನ್ನು ಪಡೆಯುತ್ತ ತಮ್ಮ ಹೊಟ್ಟೆಯನ್ನು ಶ್ರೀಮಂತಿಕೆಯನ್ನೂ ಊದಿಸಿಕೊಳ್ಳುತ್ತವೆ. ಶೂದ್ರಾತಿಶೂದ್ರರು ಉತ್ತಮ ವರ್ಗದವರಿಂದ ಬಯ್ಯಿಸಿಕೊಂಡು, ಹೊಡೆಸಿಕೊಂಡು, ಕಾಲ ಕಸವಾಗಿ, ಹಂದಿ ನಾಯಿಗಳಿಗಿಂತ ಕಡೆಯಾಗಿ ಬದುಕೆಳೆಯುತ್ತಿದ್ದುದನ್ನು ಬಸವಣ್ಣನವರು ಕಣ್ಣಾರೆ ಕಂಡಾಗ, ಅವರ ಹೃದಯ ಅನುಕಂಪೆಯಿಂದ ವಿಕಂಪಿಸುತ್ತದೆ. ಸಮಾಜ ಜಾತಿ ವೈಷಮ್ಯಗಳ, ಮತೀಯ ಕಲಹಗಳ ಕುರುಕ್ಷೇತ್ರವಾಗಿ, ದೇಶ ಅನೈಕ್ಯದ ಅಶಾಂತಿಯ ವಿಷಾಣುಗಳಿಂದ ಕಲುಷಿತವಾಗಿದ್ದುದನ್ನು ನೋಡಿದಾಗ ಅವರ ಮನಸ್ಸು ವ್ಯಾಕುಲಗೊಳ್ಳುತ್ತದೆ. ಸಮಾಜದ ಬೆನ್ನುಮೂಳೆಯಂತಿದ್ದ ಶೂದ್ರಾತಿಶೂದ್ರರನ್ನು ಮೇಲೆತ್ತದೆ, ಅಸ್ಪೃಶ್ಯತೆಯನ್ನು ತೊಡೆಯದೆ, ಜಾತಿಭೇದವನ್ನು ನಿರ್ಮೂಲನಗೊಳಿಸದೆ, ಸರ್ವರಿಗೂ ಸಮಾನಾವಕಾಶ ನೀಡದೆ ಸಮಾಜದ ಐಕ್ಯವನ್ನು ಸಾಧಿಸಲಾಗದೆಂದೂ, ಸಾಮಾಜಿಕ ಐಕ್ಯ ಮತ್ತು ಸಾಮರಸ್ಯಗಳು ಕುದುರದೆ ನಾಡಿನ ಭದ್ರತೆಯನ್ನು ರಕ್ಷಿಸಲಾಗದೆಂದೂ ಅವರು ಮನಕ್ಕೆ ತಂದುಕೊಳ್ಳುತ್ತಾರೆ. ಜೀವನದ ಸಮಗ್ರ ವಿಕಾಸಕ್ಕೆ ವ್ಯಕ್ತಿ ಸ್ವಾತಂತ್ರ್ಯ ಅತ್ಯಗತ್ಯವೆಂದೂ, ಅದು ಮಾನವನ ಅಮೂಲ್ಯ ಆಸ್ತಿಯೆಂದೂ ಅವರು ಕಂಡುಕೊಳ್ಳುತ್ತಾರೆ. ಆದ್ದರಿಂದ ಅವರು ಜಾತಿರಾಕ್ಷಸನನ್ನಳಿಸಲು ಪ್ರಾಣಾಪಾಯವನ್ನೂ ಲೆಕ್ಕಿಸದೆ ಮುನ್ನುಗ್ಗುತ್ತಾರೆ. ಉತ್ತಮಾಧಮ ಜಾತಿಯ ಜನರನ್ನು ಒಟ್ಟುಗೂಡಿಸುವ ಪ್ರಯತ್ನ ಸಾಹಸವಾಗುತ್ತದೆ; ಹುಲಿ ಜಿಂಕೆಗಳನ್ನು ತೋಳ ಕುರಿಗಳನ್ನು ಒಂದೆ ರೊಪ್ಪದಲ್ಲಿ ಸೇರಿಸಿದಂತಾಗುತ್ತದೆ. ಆದ್ದರಿಂದ ಅವರು ಧರ್ಮದ ಆಶ್ರಯದಲ್ಲಿ ಸಾಮಾಜಿಕ ಸುಧಾರಣಾ ಕ್ರಮಗಳನ್ನು ಕೈಗೊಳ್ಳುತ್ತಾರೆ. ಅಂದಿನ ವಾತಾವರಣದಲ್ಲಿ ಅದೊಂದೇ ಅವರ ಮುಂದಿದ್ದ ಮಾರ್ಗ. ಅಧರ್ಮವನ್ನು ಧರ್ಮಮಾರ್ಗದಿಂದಲೇ ಪರಿಹರಿಸಬೇಕಾಗುತ್ತದೆ. ಜಾತಿಭೇದ ನಿವಾರಣೆಗೆ ಲಿಂಗಧಾರಣೆಯೇ ಶ್ರೇಷ್ಠ ಮಾರ್ಗವೆಂದು ಅವರು ನಿಶ್ಚಯಿಸಿಕೊಂಡು, ಎಲ್ಲರನ್ನು ಬಿರುಕಿಲ್ಲದಂತೆ ಬೆಸೆದು ಒಂದು ಮಾಡೀ, ಏಕೈಕ್ಯವನ್ನು ಸಾಧಿಸುವ ಸಲುವಾಗಿ ಸೂಕ್ತ ಶಾಸನವನ್ನು ರಚಿಸುತ್ತಾರೆ. 'ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ?' ಲಿಂಗದೇವನ ಪೂಜಿಸಿ ಕುಲವನರಸುವರೆ?' ಎಂದು ಉತ್ತಮ ವರ್ಗದಿಂದ ಬಂದ ಜನರನ್ನು ಪ್ರಶ್ನಿಸುತ್ತಾರೆ.

ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರೆಲ್ಲರನೊಂದೇ ಎಂಬೆ ;
ಹಾರುವ ಮೊದಲು ಶ್ವಪಚ ಕಡೆಯಾಗಿ
ಭವಿಯಾದವರನೊಂದೇ ಎಂಬೆ
ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು
ಸಂದೇಹವುಳ್ಳಡೆ
ಹಲುಮುರಿದು ಮೂಗಕೊಯಿ, ಕೂಡಲಸಂಗಮದೇವಾ

ಎಂದವರು ಹಲುಬುತ್ತಾರೆ. 'ಶ್ವಪಚನಾದಡೇನು? ಲಿಂಗಭಕ್ತನೇ ಕುಲಜನು' ಎಂದು ಸಾರುತ್ತಾರೆ. 'ಹೊಲೆಯುಂಟೇ ಲಿಂಗವಿದ್ದಡೆಯಲ್ಲಿ? ಕುಲವುಂಟೇ ಜಂಗಮವಿದ್ದೆಡೆಯಲ್ಲಿ..? ಅಪವಿತ್ರದ ನುಡಿಯ ನುಡಿವ ಸೂತಕವೆ ಪಾತಕ' ಎಂದು ಸಿಡಿಯುತ್ತಾರೆ. 'ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲಿ ಸನ್ಮಾನವ ಮಾಡೆನೆ? ಎಂದು ತರಹರಿಸುತ್ತಾರೆ. 'ಆವ ಕುಲವಾದಡೇನು? ಶಿವಲಿಂಗವಿದ್ದವನೆ ಕುಲಜನು! ಕುಲವನರಸುವರೆ ಶರಣರಲ್ಲಿ?' ಎಂದವರು ಜಂಕಿಸುತ್ತಾರೆ. 'ಕುಲಮದವಳಿಯದನ್ನಕ್ಕ ಶರಣನಾಗಲೇಕೆ?' ಎಂದು ಉತ್ತಮರಿಗೆ ಸವಾಲೆಸೆಯುತ್ತಾರೆ.

ಲಿಂಗ ಬರಿಯ ಮತೀಯ ಲಾಂಛನವಲ್ಲ, ಆತ್ಮಜ್ಞಾನ

ಸಾಧನೆಯ ಮಾಧ್ಯಮವಲ್ಲ, ಅದು ಸಮಾಜದಲ್ಲಿ ಐಕ್ಯವನ್ನು ರೂಢಿಸುವ ಪರಿಣಾಮಕಾರೀ ಸಾಮಾಜಿಕ ಸಂಕೇತ ವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ತಾವು ಉತ್ತಮ ಕುಲದಲ್ಲಿ ಹುಟ್ಟಿದವರೆಂಬ ನೆನಹು ಮೊನೆದೋರಿದಾಗ ಅವರು ನೊಂದುಕೊಳ್ಳುತ್ತಾರೆ; ಅದನ್ನು ಮರೆಯಲು ಎಚ್ಚರವಹಿಸುತ್ತಾರೆ.

*ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ*
*ಕಷ್ಟತನದ ಹೊರೆಯ ಹೊರಿಸದಿರಯ್ಯಾ*
*ಕಕ್ಕಯ್ಯನೊಕ್ಕುದನಿಕ್ಕ. ನೋಡಯ್ಯ ;*
*ದಾಸಯ್ಯ ಶಿವದಾನವನೆರೆಯ, ನೋಡಯ್ಯಾ*
*ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ ;*
*ಉನ್ನತಮಹಿಮ ಕೂಡಲಸಂಗಮದೇವಾ,*
*ಶಿವಧೋ! ಶಿವಧೋ!*

'ಕಷ್ಟ ಜಾತಿಯ ಜನ್ಮದಲ್ಲಿ ಜನಿಸಿದೆ; ಎನಗಿದು ವಿಧಿಯೇ' ಎಂದವರು ಮಮ್ಮಲ ಮರುಗುತ್ತಾರೆ.

*ಚೆನ್ನಯ್ಯನ ಮನೆಯ ದಾಸನ ಮಗನು*
*ಕಕ್ಕಯ್ಯನ ಮನೆಯ ದಾಸಿಯ ಮಗಳು*
*ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ ಸಂಗವ*
*ಮಾಡಿದರು.*
*ಇವರಿಬ್ಬರಿಗೆ ಹುಟ್ಟಿದ ಮಗ ನಾನು*
*ಕೂಡಲಸಂಗಮದೇವ ಸಾಕ್ಷಿಯಾಗಿ.*

ತಾವು ಕಣ್ಣಾರೆ ಕಂಡ ಪ್ರಸಂಗವೊಂದು ಈ ವಚನ ರಚನೆಯ ಹಿಂದೆ ಕಾವು ಕೂತಿರಬಹುದು; ಇಲ್ಲವೆ, ತಾವು ಉತ್ತಮ ಜಾತಿಯಲ್ಲಿ ಹುಟ್ಟಿದ ಪಾಪಕ್ಕೆ ಹಲವು ಬಗೆಯ ಪ್ರಾಯಶ್ಚಿತ್ತಗಳನ್ನವರು ನೆನೆಯುತ್ತಿರಬಹುದು.

*ಅಪ್ಪನು ನಮ್ಮ ಮಾದಾರ ಚೆನ್ನಯ್ಯ ;*
*ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ;*
*ಚಿಕ್ಕಯ್ಯ ನೆಮ್ಮಯ್ಯ, ಕಾಣಯ್ಯ ;*
*ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ ;*
*ಎನ್ನನೇತಕ್ಕರಿಯಿರಿ, ಕೂಡಲಸಂಗಯ್ಯ ?*

ಎಂದವರು ತಮ್ಮ ಹಳೆಯ ವಂಶಾವಳಿಯನ್ನು ಮರೆಯಲು ಹೊಸ ವಂಶಾವಳಿಯನು ಹೆಣೆದುಕೊಳ್ಳುತ್ತಾರೆ.

ಹೊಸ ಧರ್ಮವನ್ನು ಸ್ವೀಕರಿಸಿದ ಹೊಲೆಯ ಮಾದಿಗರು ಎದುರುಗೊಂಡಾಗ ಉತ್ತಮರು ಅವರ ಕುಲ ಗೋತ್ರಗಳನ್ನು ವಿಚಾರಿಸುತ್ತಿದ್ದಿರಬೇಕು. ಅಂಥ ವಿಚಾರಣೆಯ ಹಿನ್ನಲೆಯಲ್ಲಿ ನೂತನೋತ್ಸಾಹಿಗಳ ಮುಖ ಮುರಿಯುವ, ಅವರನ್ನು ಕೆಣಕಿ ಅವಮಾನ ಗೊಳಿಸುವ ಕಟಕಿ ವಿಡಂಬನೆಗಳು ಆಗಾಗ್ಗೆ ಸಿಡಿಯುತ್ತಿದ್ದಿರಬೇಕು. ಅಂಥ ಸಂದರ್ಭದಲ್ಲಿ ಲಿಂಗಧಾರಿಗಳಾದ ಹೊಲೆಯ ಮಾದಿಗರಿಗೆ ತುಂಬ ನೋವಾಗುತ್ತಿದ್ದಿರಬೇಕು. ಆ ಸಮಯ ದಲ್ಲಿ ಬಸವಣ್ಣನವರ ಮನಸ್ಸಿಗೆ ಅಪಾರ ಆಘಾತ ವಾಗಿರಬೇಕು.

*ಗೋತ್ರನಾಮವ ಬೆಸಗೊಂಡಡೆ*
*ಮಾತ ನೂಕದೆ ಸುಮ್ಮನಿದ್ದಿರಿದೇನಯ್ಯ ?*
*ತಲೆಯ ಕುತ್ತಿ ನೆಲನ ಬರೆಯುತ್ತಿದ್ದಿರಿದೇನಯ್ಯ ?*
*ಗೋತ್ರ ಮಾದಾರ ಚೆನ್ನಯ್ಯ*
*ಡೋಹಾರ ಕಕ್ಕಯ್ಯನೆಂಬುದು? ಕೂಡಲ ಸಂಗಯ್ಯಾ*

ಎಂದು ಬಸವಣ್ಣನವರು ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಲು ಹವಣಿಸುತ್ತಾರೆ. ತಮ್ಮ ಗೋತ್ರವನ್ನು ವಿಚಾರಿಸಿದಾಗ ಬಸವಣ್ಣ ಸಹ ಹಾಗೆಯೇ ಹೇಳಿಕೊಳ್ಳುತ್ತಿದ್ದಿರಬೇಕು. 'ಕುಲಗೋತ್ರಗಳ ತಂಟೆ ನಿಮಗೇಕೆ? ನಮ್ಮ ಚಾರಿತ್ರ್ಯವನ್ನು ನೋಡಿ' ಎಂದು ಪ್ರಶ್ನಕರನ್ನು ಛೇಡಿಸುತ್ತಿದ್ದಿರಬೇಕು.

ವೇದೋಪನಿಷತ್ತುಗಳ ಕಾಲದ ಭರತಖಂಡದಲ್ಲಿ ಕುಲದ ಸೂತಕವಾಗಲಿ, ಅಸ್ಪೃಶ್ಯಕತೆಯ ಶಾಪವಾಗಲಿ ಇರಲಿಲ್ಲ. ಉತ್ತಮ ವರ್ಗದವರು ತಂತಮ್ಮ ಗೋತ್ರಗಳ ಮೂಲಪುರುಷರೆಂದು ಇಂದು ಆರಾಧಿಸುತ್ತಿರುವ ಹಿಂದಿನ ಕವಿ ಋಷಿ ಸಂತರೆಲ್ಲರೂ ಹೀನ ಕುಲಜರೆಂಬುದನ್ನು ಮರೆಯುವಂತಿಲ್ಲ.

*ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ*
*ಮತಂಗಿಯ ಮಗ*
*ಮಂಡೋದರಿ ಕಪ್ಪೆಯ ಮಗಳು !*
*ಕುಲವನರಸದಿರಿಂ ಭೋ ಕುಲದಿಂದ*
*ಮುನ್ನೇನಾದಿರಿಂ ಬೋ?*
*ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ,*
*ಕಶ್ಯಪ ಕಮ್ಮಾರ,*
*ಕೌಂಡಿನ್ಯನೆಂಬ ಋಷಿ ಮೂರು ಭುವನವರಿಯೆ*
*ನಾವಿದ, ಕಾಣಿ ಭೋ!*





ನಮ್ಮ ಕೂಡಲಸಂಗನ ವಚನವಿಂತೆಂದುದು

*ಶ್ವಪಚೋಪಿಯಾದಡೇನು ? ಶಿವಭಕ್ತನೆ ಕುಲಜಂ ಭೋ.*

ಈ ಪುರಾಣಪುರುಷರೆಲ್ಲರೂ ವಿಶೇಷವಾಗಿ ಇಂದಿನ ಉತ್ತಮರಿಗೆ ಆರಾಧ್ಯ ಸ್ಥಾನದಲ್ಲಿರುವುದರಿಂದ ಜಾತಿ ಭೇದ ಅಸಂಗತವೆಂದೂ, ಅರ್ಥರಹಿತವೆಂದು ಬಸವಣ್ಣ ಒರೆಯುತ್ತಾರೆ.

ಅಸ್ಪೃಶ್ಯತಾ ನಿರ್ಮೂಲನದಿಂದಲ್ಲದೆ ದೇಶಕ್ಕೆ ಭವಿಷ್ಯ ವಿಲ್ಲವೆಂದು ಹನ್ನೆರಡನೆಯ ಶತಮಾನದಲ್ಲಿಯೇ ಬಸವಣ್ಣ ಮನಗಂಡಿದ್ದರೆಂಬುದು ಅದ್ಭುತ ಸಂಗತಿ. ಅಸ್ಪೃಶ್ಯತೆ ಯೊಂದು ಶಾಪವೆಂದು ಈ ಶತಮಾನದ ಗಾಂಧೀಜಿ ಸಹ ಕಳವಳ ವ್ಯಕ್ತಪಡಿಸಿದ್ದಾರೆ. ಈ ಬಗ್ಗೆ ಸ್ವಾಮಿ ವಿವೇಕಾನಂದರು ಏನು ಹೇಳುತ್ತಾರೆ, ಕೇಳಿ 'ಹಿಂದುಗಳ ಇಂದಿನ ಮತ ಜ್ಞಾನಮಾರ್ಗವೂ ಅಲ್ಲ, ವಿವೇಕಪಥವೂ ಅಲ್ಲ. 'ನನ್ನನ್ನು ಮುಟ್ಟಬೇಡ, ನನ್ನನ್ನು ಮುಟ್ಟಬೇಡ' ಮುಟ್ಟತನವೇ ಆ ಮತದ ಹಿರಿಮೆಯಾಗಿದೆ. ಆ ಮುಟ್ಟತನದ ಕುಮತದಲ್ಲಿ ನಿಮ್ಮ ಬಾಳನ್ನು ಹಾಳುಮಾಡಿಕೊಳ್ಳಬೇಡಿ'.

'ನಿಂನಿಮ್ಮ ಉದ್ದೇಶ ಸಾಧನೆಗಾಗಿ ಶೂದ್ರರನ್ನು ಮುಟ್ಟಿಸಿಕೊಂಡದ್ದಾದರೆ ಯಾವ ಅಭ್ಯಂತರವೂ ಇಲ್ಲ' ಆದರೆ ನಿಮ್ಮ ಕೆಲಸ ಮುಗಿದ ನಂತರ, ನೀರಲ್ಲಿ ಮುಳುಗು ಹಾಕುತ್ತೀರಿ. ಏಕೆಂದರೆ ಶೂದ್ರರು ಅಪವಿತ್ರರಾಗಿರೋಣ ದರಿಂದ ಬೇರೆ ಸಂದರ್ಭಗಳಲ್ಲಿ ಅವರನ್ನು ಮುಟ್ಟಿಸಿಕೊಳ್ಳ ಬಾರದು. ಯತಿಗಳು, ಸನ್ಯಾಸಿಗಳು ಮತ್ತು ಬ್ರಾಹ್ಮಣರು ದೇಶವನ್ನು ವಿನಾಶದ ರಸಾತಲಕ್ಕೆ ನೂಕಿದ್ದಾರೆ. ಯಾವಾಗಲೂ ಚೌರ್ಯ ಮತ್ತು ದೌಷ್ಟ್ಯಗಳಲ್ಲಿಯೆ ಮುಳುಗಿರುವ ಇವರು ಮತಪ್ರಚಾರಕರಂತೆ ನಟಿಸುತ್ತಾರೆ. ಯಾವ ಜನರಿಂದ ದಾನಗಳನ್ನು ಸ್ವೀಕರಿಸುತ್ತಾರೆಯೋ ಅಂಥವರು ತಮ್ಮನ್ನು ಮುಟ್ಟಲಾಗದೆಂದು ಉತ್ತಮ ವರ್ಗದ ಜನ ಬೊಬ್ಬಿರಿ ಯುತ್ತಾರೆ. ಅಂಥಹವರಿಂದ ಮಹತ್ಕಾರ್ಯ ಸಾಧನೆ ಸಾಧ್ಯವೇ?

ಉತ್ತಮನಾಗಲಿ ಅಧಮನಾಗಲಿ ಅವರ ಅಂಗಗಳಲ್ಲಿ ಹಾಗೂ ಅವರ ಅಂಗಸಂಬಂಧವಾದ ವ್ಯಾಪಾರಗಳಲ್ಲಿ ವ್ಯತ್ಯಾಸವಿಲ್ಲ. ಅವರು ಕುಡಿಯುವ ನೀರಾಗಲಿ, ಸೇವಿಸುವ ಗಾಳಿಯಾಗಲಿ, ತಿನ್ನುವ ಅನ್ನವಾಗಲಿ ಬೇರೆಯಲ್ಲ. ನಿಸರ್ಗ ಧರ್ಮವೇ ಹೀಗಿರುವಾಗ ಅಸ್ಪೃಶ್ಯತೆ ಜಾತೀಯತೆಗಳು ಕೇವಲ ಕೃತ್ರಿಮ, ಧರ್ಮ ವಿರುದ್ಧವೆಂಬುದಂತು ಸುಷ್ಪಷ್ಟ ಅದಕ್ಕೇ ಸರ್ವಜ್ಞ ಪ್ರಶ್ನೆ ಎತ್ತುತ್ತಾನೆ.

ನಡೆವುದೊಂದೇ ಭೂಮಿ, ಕುಡಿವುದೊಂದೇ ನೀರು
ಸುಡುವಗ್ನಿಯೊಂದೇ ಇರುತಿರಲು ಕುಲಗೋತ್ರ
ನಡುವೆ ಎತ್ತಣದು? ಎಂದು.

ಈ ತತ್ವವನ್ನೇ ಬಸವಣ್ಣನವರು ಮತ್ತಷ್ಟು ಸ್ಪಷ್ಟವಾಗಿ ಬಿತ್ತರಿಸುತ್ತಾರೆ.

*ನೆಲವೊಂದೆ ಹೊಲಗೇರಿ ಶಿವಾಲಯಕ್ಕೆ*
*ಜಲವೊಂದೆ ಶೌಚಾಚಮನಕ್ಕೆ*
*ಕುಲವೊಂದೆ ತನ್ನ ತಾನರಿದವಂಗೆ*
*ಫಲವೊಂದೆ ಷಡುದರುಶನ ಮುಕ್ತಿಗೆ*
*ನಿಲವೊಂದೆ, ಕೂಡಲಸಂಗಮದೇವಾ, ನಿಮ್ಮನರಿದವಂಗೆ*

ಹೊಲೆಯನ ಮೂಗಿನಿಂದ ಬಂದ ಉಸಿರು ಗಾಳಿ ಯಲ್ಲಿ ಸೇರಿಕೊಂಡಿರುವಾಗ ಹೊಲೆಯ ಹಾರುವರಿಬ್ಬರೂ ನಡೆಯುವ ದಾರಿ ಒಂದೆಯಾಗಿರುವಾಗ, ಹೊಲಗೇರಿ ಶಿವಾಲಯಕ್ಕೆ ಒಂದೆ ನೆಲ ಆಧಾರವಾಗಿರುವಾಗ (ಈ ಸಂದರ್ಭದಲ್ಲಿ ರಾಮಜನ್ಮಭೂಮಿ-ಬಾಬರಿಮಸೀದಿ ವಿವಾದ ನೆನಪಿಗೆ ಬರುತ್ತದೆ) ಕುಲದ ಮಾತಿಗೆ ಬೆಲೆ ಇಲ್ಲವಾಗುತ್ತದೆ, ಇದು ಮತಿಹೀನರ ಭ್ರಾಮಕ ಜಲ್ಪವೆಂದಾಗುತ್ತದೆ.

ಜಾತಿ ವ್ಯವಸ್ಥೆ ಅತ್ಯಂತ ಕೃತಕವಾದದ್ದೆಂದೂ, ಕಸಬೇ ಜಾತಿಯಾಗಿ, ವೃತ್ತಿಯಾಧಾರದ ಮೇಲೆ ಮೇಳುಕೀಳುಗಳ ಭಾವನೆ ರೂಢಿಗತವಾಯಿತೆಂದೂ, ಇದರಿಂದಾಗಿ ಸಮಾಜ ದಲ್ಲಿ ಒಡಕುಂಟಾಯಿತೆಂದೂ ಬಸವಣ್ಣ ಬಲ್ಲರು.

*ಕಾಸಿ ಕಮ್ಮಾರನಾದ; ಬೀಸಿ ಮಡಿವಾಳನಾದ;*
*ಹಾಸನಿಕ್ಕಿ ಸಾಲಿಗನಾದ ವೇದನನೋದಿ ಹಾರುವನಾದ*
*ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?*
*ಇದು ಕಾರಣ ಕೂಡಲಸಂಗಮದೇವಾ,*
*ಲಿಂಗಸ್ಥಲವನರಿದವನೆ ಕುಲಜನು !*

ಅಂತೆಯೇ ಕುರಿಗಾಹಿ ಕುರುಬನಾಗುತ್ತಾನೆ, ದನಗಾಹಿ ಗೊಲ್ಲನಾಗುತ್ತಾನೆ, ಬೇಸಾಯಗಾರ ಒಕ್ಕಲಿಗನಾಗುತ್ತಾನೆ; ಅವನು ಮಾಡುವ ವೃತ್ತಿಯಲ್ಲದೆ ಅವರ ನಡುವೆ ಬೇರೆ ಯಾವ ವ್ಯತ್ಯಾಸಗಳೂ ಇಲ್ಲ. ಸಾಮಾನ್ಯ ಜನರು ಒಂದು ಗೂಡದಂತೆ ವೃತ್ತಿಭೇದವನ್ನು ಮುಂದು ಮಾಡಿ, ತಮ್ಮ ಬೇಳೆ ಬೇಯಿಸಿಕೊಳ್ಳಲು ಬುದ್ಧಿ ಜೀವಿಗಳು ಮಾಡಿದ ಮಾಟವದು; ಹೂಡಿದ ಹೂಟವಿದು.

—ಮುಂದುವರೆಯುತ್ತದೆ.

## ನವರಾತ್ರಿಯ ಶಕ್ತಿ ಉಪಾಸನೆ

–ಶಕುಂತಲಾ. ಯು, 'ಜ್ಯೋತಿರ್ಲಿಂಗ' ಶಿವಮೊಗ್ಗ ರಸ್ತೆ, ಹೈಸ್ಕೂಲ್ ಬಡಾವಣೆ, ಹೊನ್ನಾಳಿ.

*ಶಿವಃ ಶಕ್ತಾಯುಕ್ತೋ ಭವತಿ ಶಕ್ತಃ ಪ್ರಭವಿತುಂ ।*
*ನ ಚೆ ದೇವಿಂ ದೇವೋ ನ ಖಲು ಶಕ್ತಃ ಸ್ಪಂದಿತುಮಪಿ॥*

ಶಿವನಾದರೂ ಶಕ್ತಿ ಸಹಿತನಾದಾಗ ಸರ್ವಸಮರ್ಥ ಶಕ್ತಿ ರಹಿತ ಶಿವನು ಹರಿದಾಡಲೂ ಕೂಡ ಅಸಮರ್ಥನು. 'ಶಕ್ತಿ'ಯ ಮಹತ್ವವನ್ನು ಶಂಕರಾಚಾರ್ಯರು ತಮ್ಮ ಆನಂದಲಹರಿಯಲ್ಲಿ ಈ ರೀತಿ ಹೇಳಿದ್ದಾರೆ. ಇಂತಹ ಶಕ್ತಿಯನ್ನು ಜಗನ್ಮಾತೆ, ಅಂಬಿಕಾ, ಉಮಾ, ಕಾತ್ಯಾಯಿನಿ, ಗೌರಿ, ಅಪರ್ಣಾ ಎಂದೆಲ್ಲಾ ಆಚರಿಸಲಾಗುತ್ತದೆ. ಶಕ್ತಿಯ ವಿಶೇಷ ಆರಾಧನಾ ಪರ್ವ ಆಶ್ವಿಜ ಶುದ್ಧ ಪಾಡ್ಯದಿಂದ ನವಮಿಯವರೆಗೆ ಆಚರಿಸಲ್ಪಡುವ ನವರಾತ್ರಿ, ಹತ್ತನೆಯ ದಿನ ವಿಜಯದಶಮಿ. ದೇವಿಯು ಮಹಿಷಾಸುರ, ದೂಮ್ರ, ಚಂಡ–ಮುಂಡ ಶುಂಬ–ನಿಶುಂಭ ರಕ್ತ ಬೀಜ ಮುರಿ ರಕ್ಕಸರ ಸಂಹಾರಕ್ಕಾಗಿ ಎತ್ತಿದ ಅವತಾರಗಳನ್ನು ವಿವಿಧ ರೂಪಗಳಲ್ಲಿ ಆರಾಧಿಸಲಾಗುತ್ತದೆ. ನಿತ್ಯವೂ ಪೂಜೆಗೈದು ಏಳನೇ ದಿನ ಶಾರದಾ ಸ್ಥಾಪನೆ. ಎಂಟನೇ ದಿನ ದುರ್ಗಾಷ್ಟಮಿ, ಮಹಾಲಕ್ಷ್ಮಿ ಆರಾಧನಾ ದಿನ. ಒಂಭತ್ತನೇ ದಿನ ಮಹಾನವಮಿ. ಮಹಾಕಾಳಿಯ ವಿಶೇಷ ಆರಾಧನಾ ದಿನ. ಮರುಳರನ್ನು, ದುಷ್ಟರನ್ನು, ರಾಕ್ಷಸರನ್ನು, ಆದಿಪರಾಶಕ್ತಿ ಸಂಹರಿಸಿದ ಒಂಭತ್ತು ದಿನಗಳು ನವರಾತ್ರಿ ಅಂದರೆ, ಗೆಲುವಿನ ಸಂಭ್ರಮಾಚರಣೆ ವಿಜಯದಶಮಿ. ರಾವಣನ ಸಂಹಾರದ ದಿನ. ಮಹಾಭಾರತ ಯುದ್ಧ ಮುಗಿದು ಧರ್ಮರಾಜ್ಯ ಸ್ಥಾಪನೆಯ ದಿನ, ದ್ರೌಪದೀ ಕೇಂದ್ರೀಕೃತ ಮಹಾಭಾರತದದ ಯಶಸ್ಸು ಸ್ತ್ರಿ ಶಕ್ತಿ ವಿಜಯದ ದಿನ. ದುರ್ಗೆ ದುಷ್ಟರನ್ನು ಸಂಹರಿಸಿದ ದಿನ. ಚಿಕ್ಷರು(ಕಾಮ) ರುದಗ್ರ(ಕೋಪ) ರಸಿಲೋಮ(ಲೋಭ) ಬಿಡಾಲ(ಮೋಹ) ಮಹಿಷಾಸುರ (ಅಜ್ಞಾನ) ಚಾಮುಂಡ(ಮದ) ಶಂಭ (ಅಹಂಕಾರ) ವಿಶುಂಭ(ಮಮಕಾರ) ಈ ರಾಕ್ಷಸರ ನಾಶ ಎಂದರೆ ನಿಮ್ಮೊಳಗಿನ ಅಸುರೀ ಶಕ್ತಿಗಳ ನಾಶದ ಸಂಕೇತ. ರಕ್ತಬೀಜ ಎಂದರೆ ರಾಗ ವಿಷಯ.

'ಯಾ ದೇವಿ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥ ಎಂದು ಜಗನ್ಮಾತೆಯನ್ನು ಪೂಜಿಸುತ್ತಾರೆ.

ವಿಜಯದಶಮಿಯ ದಿನ ಬನ್ನಿ ಬಂಗಾರದ ವಿನಿಮಯ ಮಾಡಿ, ಅಸೂಯೆ ದ್ವೇಷಾದಿಗಳನ್ನು ಮರೆತು ಒಂದಾಗುತ್ತಾರೆ. ಬನ್ನಿ ಬಂಗಾರ ತೆಗೆದುಕೊಂಡು ಬಂಗಾರದ ಹಾಗೆ ಇರೋಣ ಎಂದು ಪರಸ್ಪರ ಅಭಿನಂದಿಸುತ್ತಾರೆ. ಬನ್ನಿ ಶಮಿವೃಕ್ಷದ ಎಲೆ. ಕನ್ನಡದಲ್ಲಿ ಬನ್ನಿ, ಸಂಸ್ಕೃತದಲ್ಲಿ ಶಮಿ, ತೆಲುಗಿನಲ್ಲಿ ಜಮ್ಮಿ, ತಮಿಳಿ ನಲ್ಲಿ ಪೇರುಂಬೆ, ಮಲೆಯಾಳದಲ್ಲಿ ಪರಾಂಪು. ಸಸ್ಯ ಶಾಸ್ತಜ್ಞರು 'ಫ್ರೆಸೊಪಿಸ್ ಸ್ಪೈಸಿಗೆರಾ' ಎನ್ನುತ್ತಾರೆ. ಶಮಿ ವೃಕ್ಷದ ಟೊಂಗೆಗಳು ಮುಳ್ಳುಗಳಿಂದ ಕೂಡಿರುತ್ತದೆ.

ಬನ್ನಿ ಮರ ರುದ್ರದೇವನ ಆವಾಸ ಸ್ಥಾನ. ಶಿವನನ್ನು ಶಮಿ ಆರೋಹ ಎನ್ನುತ್ತಾರೆ. ಶಮಿ ವೃಕ್ಷವು ಪಾಪ ಶಮನಕಾರಿಯಾಗಿದ್ದು, ಶತ್ರುಗಳನ್ನು ಜಯಿಸುವ ಶಕ್ತಿಯನ್ನು ನೀಡುವ ಮರವಾಗಿದ್ದು ಅರ್ಜುನ ಅಜ್ಞಾತ ವಾಸದಲ್ಲಿದ್ದಾಗ ಶಮಿ ವೃಕ್ಷ ಅವನ ಗಾಂಢೀವ ಧನುಸ್ಸಿಗೆ ಆಶ್ರಯವಾಗಿತ್ತು ಅದಕ್ಕೆ

ಶಮಿ ಶಮಯತೆ ಪಾಪಂ ಶಮಿ ಶತ್ರು ವಿನಾಶಿನೀ
ಅರ್ಜುನಸ್ಯ ಧನುರ್ಧಾರೀ ರಾಮಸ್ಯ ಪ್ರಿಯಾಭೂಷಿಣೀ

ಎನ್ನುತ್ತಾರೆ ಶಮಿ ಎಂಬುದಕ್ಕೆ ನೆಮ್ಮದಿ ಶಾಂತಿ ಎಂಬ ಗ್ರಾಂಥಿಕ ಅರ್ಥಗಳಿವೆ. ಶಾಂತಿ ಸುಖ ನೆಮ್ಮದಿಗಾಗಿ ಬನ್ನಿ ಎಲೆಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ.

ವಿಜಯದಶಮಿಯಂದು ಊರ ಪ್ರಮುಖರು ಗ್ರಾಮ ದೇವರ ಅಥವಾ ಸ್ವಾಮಿಗಳನ್ನು ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಿ ಗ್ರಾಮದ ಸೀಮೋಲ್ಲಂಘನೆ ಮಾಡಿ ಅಲ್ಲಿರುವ ಶಮೀ ವೃಕ್ಷಕ್ಕೆ ಪೂಜೆ ಸಲ್ಲಿಸುತ್ತಾರೆ. ಅಂದು ಬನ್ನಿ ಬಂಗಾರವಾಗುತ್ತದೆ. ಸ್ವಾಮಿಗಳಿಗೆ ಬನ್ನಿ ಮುಡಿದು ಪರಸ್ಪರ ಮುಡಿಯುತ್ತಾರೆ. ಪ್ರತಿ ಊರಿನಲ್ಲಿ ದೇವಿಯ ದೇವಾಲಯಗಳು ಭಿನ್ನಭಿನ್ನವಾಗಿರುತ್ತವೆ. ಬೇರೆ ಬೇರೆ ರೂಪಗಳಲ್ಲಿರುತ್ತವೆ. ಹೀಗಾಗಿ ದುರ್ಗಾದೇವತೆ ವಿಭಿನ್ನ ರೂಪಗಳಲ್ಲಿದ್ದು ವ್ಯಾಪಕವಾಗಿ ಪೂಜೆ ಹೊಂದುತ್ತಾಳೆ. ಪ್ರಕೃತಿ ಪೂಜೆ ಮಹತ್ವದ್ದು.

ಆದಿ ಶಕ್ತಿ ಇಚ್ಛಾ, ಜ್ಞಾನ–ಕ್ರಿಯಾ ಶಕ್ತಿಯಾಗಿ ಪೂಜಿಸಲ್ಪಡುತ್ತಾಳೆ. ನಮ್ಮಲ್ಲೂ ಮೈಸೂರು ಚಾಮುಂಡಿ, ಕೊಲ್ಲೂರು ಮೂಕಾಂಬೆ, ಕಟೀಲು ದುರ್ಗೆ, ಹೊರನಾಡು ಅನ್ನಪೂರ್ಣೇಶ್ವರಿ, ಶೃಂಗೇರಿ ಶಾರದೆ, ಸವದತ್ತಿ ಮಲ್ಲಮ್ಮ, ಸಿರಸಿಯ ಮಾರಿಕಾಂಬೆ ಹೀಗೆ ಶಕ್ತಿ ನೆಲೆಗಳು ಅಭಯ ನೀಡುವ ತಾಣಗಳಾಗಿವೆ. ಮಾತೆಯ ಗೆಲುವಿನ ಸ್ಮರಣೆಯೇ ಶರನ್ನವರಾತ್ರಿ

*





## ಸಮಾಜ ವಿಜ್ಞಾನಿ ಬಸವಣ್ಣ

–ಡಾ॥ ರುದ್ರಣ್ಣ ಚಿಲಮಿ, ಎಸ್.ವ್ಹಿ.ಇ.ಎಸ್. ದೂರಶಿಕ್ಷಣ, ಸ್ನಾತಕೋತ್ತರ ಅಧ್ಯಯನ ಕೇಂದ್ರ, ಹಾರೂಗೇರಿ–೫೯೧೨೨೦

ಬಸವಣ್ಣನವರು ಭಾರತಕ್ಕೆ, ಜಗತ್ತಿಗೆ, ಕರ್ನಾಟಕದ ಶ್ರೇಷ್ಠ ಕೊಡುಗೆದಾರರು. ಅವರು ಬಸವಣ್ಣ ಎನ್ನುವ ಪ್ರೀತಿಯ ಹೆಸರಿನಿಂದಲೇ ಜನರ ಬಾಯಿಯಲ್ಲಿ ಅನಂತ ಕಾಲವೂ ಉಳಿದಿರುವವರು. ಅವರನ್ನು ಬುದ್ಧ, ಕ್ರಿಸ್ತ ಹಾಗೂ ಗಾಂಧೀಜಿಯವರೊಂದಿಗೆ ಹೋಲಿಸಿದವರಿದ್ದಾರೆ. ಆದರೆ ಅವರಿಗೆ ಈ ಯಾವ ಹೋಲಿಕೆಯೂ ಸರಿ ಹೋಗುವುದಿಲ್ಲ. ಅವರು ಯಾರಂತಿದ್ದಾರೆಂದು ಕೇಳಿದರೆ; ಬಸವೇಶ್ವರರಂತೆಯೇ ಇದ್ದಾರೆಂದು ಹೇಳಿದರೆ ಹೆಚ್ಚು ಯತಾರ್ಥವಾದೀತು. ಅವರೊಬ್ಬ ಯುಗದ ಉತ್ಸಾಹಿ, ಯುಗ ಪ್ರವರ್ತಕ.

ಬಸವಣ್ಣನವರು ಬುದ್ಧನಿಗಿಂತ ಮಿಗಿಲು, ಜನರ ದೇವರು, ಮಹಾನುಭಾವರು, ಮಹಾಮಹಿಮರು, ಜನಸಾಮಾನ್ಯರ ಪ್ರವಾದಿ, ಯಾರು ಬೇಕಾದರೂ ಜಂಗಮರಾಗಬಲ್ಲರೆಂದು ಸಾರಿದವರು. ಮನುಷ್ಯರೆಲ್ಲರೂ ಒಂದೇ ಎಂದು ಹೇಳಿದವರು. ಸರಿ ಸಮಾನತಾ ಬೀಜ ಬಿತ್ತಿ ಬೆಳೆಸಿದವರು. ಮನುಷ್ಯರನ್ನೆಲ್ಲ ಏಕ ಸೂತ್ರದಲ್ಲಿ ಹಿಡಿದುಕೊಂಡಂಥ ಸಮಾಜವನ್ನು ಬಸವಣ್ಣನವರು ಸೃಷ್ಟಿಸಿದರು. ಸಮಾಜ ಸ್ತರದ ಮೇಲೆ ನಿಂತು; ಸಂಸಾರ ಮಾಡುತ್ತ, ಆಧ್ಯಾತ್ಮ ಸಾಧನೆ ಮಾಡುವ ಅನುಭಾವದ ಹಾದಿಯನ್ನು ಅವರು ತೋರಿಸಿ ಕೊಟ್ಟರು. ಆ ಹಾದಿಯಲ್ಲಿ ಯಾರು ಬೇಕಾದರೂ ನಡೆಯಬಹುದು. ತಮ್ಮ ಗುರಿ ಗಮ್ಯಗಳನ್ನು ಸೇರಬಹುದೆಂದು ಆಚರಿಸಿದವರು ಭಕ್ತಿಯ ತಳಪಾಯವನ್ನು ಹಾಕಿದ ದೃಷ್ಟಾರರವರು.

ಸಮಾಜವನ್ನು ಶುದ್ಧೀಕರಿಸಿಸಿದವರು ಬಸವಣ್ಣ, ಶುದ್ಧವಾಗುವೆಂದರೆ ಸಮಾಜದಲ್ಲಿ ಸಮಾನತೆಯನ್ನು ತರುವುದು ಎಂದಿದ್ದಾರೆ. ಈ ಸಾಮಾಜಿಕ ಸಮಾನತೆಗೆ ಮೂಲವಾದುದು ಆರ್ಥಿಕ ಸಮಾನತೆ ಎಂಬುದನ್ನು ಅರಿತಿದ್ದವರು ಬಸವಣ್ಣ. ಅಂತೆಯೇ ಅವರು ಅಂದು ಬಿಜ್ಜಳನ ಕಲ್ಯಾಣ ರಾಜ್ಯದಲ್ಲಿ ಅರ್ಥಮಂತ್ರಿಯಾಗಿದ್ದರು. ಅವರಲ್ಲಿ ಎಲ್ಲ ಕ್ಷೇತ್ರಗಳಲ್ಲಿಯೂ ಅನುಭಾವವು ಅರಳಿ ಘಮಘಮಿಸುತ್ತಿತ್ತು. ಬಸವಣ್ಣ ರೂಪಿಸಿದ ಅರ್ಥವ್ಯವಸ್ಥೆಗೆ ಎರಡು ಮಗ್ಗಲುಗಳಿದ್ದವು. ಒಂದು ಕಾಯಕ (ಶ್ರಮತತ್ತ್ವ ಅಥವಾ ಶ್ರಮಸಂಸ್ಕೃತಿ) ಇನ್ನೊಂದು ದಾಸೋಹ. ದಾಸೋಹವೆಂದರೆ ಧಾರಾಳತನದಿಂದ ಧಾರೆ ಎರೆಯುವುದಲ್ಲ. ಸರಿಯಾಗಿ ವಿತರಣೆ ಮಾಡುವುದಾಗಿದೆ. ಕಾಯಕ ಮಾಧ್ಯಮದಿಂದ ಗಳಿಸಬೇಕು ಅದನ್ನು ದಾಸೋಹ ಮಾಧ್ಯಮದಿಂದ ಬಳಸಬೇಕು ಎಂಬ ಆದರ್ಶದ ಸೂತ್ರದಲ್ಲಿ 'ಕಲ್ಯಾಣರಾಜ್ಯ' ಕಟ್ಟುವುದು ಮಂತ್ರಿ ಬಸವಣ್ಣನ ಧ್ಯೇಯವಾಗಿತ್ತು. ಬಸವಣ್ಣನವರ ಈ ತತ್ತ್ವವಿಂದು ಏಕೆ ನಡೆಯುತ್ತಿಲ್ಲ, ಪಾಲಿಸುತ್ತಿಲ್ಲ ? ಸಾಧ್ಯವಾಗುತ್ತಿಲ್ಲವೆ ? ಎಂದು ಪ್ರಶ್ನಿಸಿದರೆ ಅದಕ್ಕೆ ಉತ್ತರವೂ ಹುಡುಕಿದರೆ ಸಿಕ್ಕೀತು! ಪರಿವರ್ತನೆ ಬದಲಾವಣೆಯ ಗುಣ ಮಾನವನಿಗಿದೆ. ಹಣ ಗಳಿಸುವ ಹಾದಿಗಳು ನೂರೆಂಟಾದರೂ, ಕಾಯಕ ತತ್ತ್ವದಿಂದ, ಶ್ರಮ ಸಂಸ್ಕೃತಿಯಿಂದ ಸಂಗ್ರಹಿಸಿದ್ದು ಮಾತ್ರ ನಮ್ಮದಾಗುತ್ತದೆ. ಇಲ್ಲವಾದರೆ ತಪ್ಪುದಾರಿ ತುಳಿದರೆ ಅನವರತವೂ ನರಕ, ಪಾಪವೆಂಬ ಕುಳಿಯಲ್ಲಿ ಬಿದ್ದು ಒದ್ದಾಡಬೇಕಾಗುತ್ತದೆ. ಆದ್ದರಿಂದ ಆರಿಸಿ ಉಣಬೇಕೆಂದು ಹಿರಿಯರು ಹೇಳಿದ ಮಾತನ್ನು ನಾವಿಂದು ಅವಶ್ಯವಾಗಿ ಪಾಲಿಸಬೇಕಾಗಿದೆ.

ಬಸವಾದಿ ಪ್ರಮಥರು ಅಂದು ಸಾಕಷ್ಟು ಬಿಕ್ಕಟ್ಟು–ಇಕ್ಕಟ್ಟುಗಳನ್ನು ಎದುರಿಸಿದರೆಂಬುದು ಅವರ ವಚನ ಸಾಹಿತ್ಯ ಮತ್ತು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಹಾಗೆ ವಿಚಾರಿಸಿದರೆ ಇಂದಿನವರ ಜೀವನವೇ ಬಲು ಸರಳವಾಗಿದೆಯೆಂದೆನಿಸುತ್ತದೆ. ಶರಣರು ಬಸವಣ್ಣನವರ ನೇತೃತ್ವದಲ್ಲಿ ಸಬಲ ಸಮಾಜಕ್ಕಾಗಿ ಬುದ್ಧನಿಗಿಂತ ಹೆಚ್ಚು ವೈಜ್ಞಾನಿಕವಾಗಿ ವಿಚಾರಿಸಿ, ವ್ಯಕ್ತಿ ಕಲ್ಯಾಣದೊಂದಿಗೆ ಸಮಾಜ ಕಲ್ಯಾಣಕ್ಕಾಗಿಯೂ ಶ್ರಮಿಸಿದರು. ಈ ಉಭಯ ಕಲ್ಯಾಣಗಳನ್ನು 'ಲಿಂಗ ವ್ಯಸನ, ಜಂಗಮ ಪ್ರೇಮ' ವೆಂದು ಬಸವಣ್ಣನವರು ಕರೆದಿರುವರು. ಆದುದರಿಂದ ಎಲ್ಲರೂ ಸೇರುವಂತಹ ತತ್ತ್ವವನ್ನು ನಿರೂಪಿಸಿ ಅನುಷ್ಠಾನಕ್ಕೆ ತಂದರು. ಅದುವೇ 'ಸೋಹಂ' ಎಂದೆನಿಸದೆ – 'ದಾಸೋಹಂ ಎಂದೆನಿಸಯ್ಯಾ!' ಎಂದು ಹೇಳಿ ಜಂಗಮ ದಾಸೋಹ ತತ್ವಕ್ಕೆ ಅವರು ಮಾದರಿಯೆನಿಸಿದ್ದಾರೆ.

ಪ್ರಾಚೀನ ಭಾರತೀಯ ತತ್ತ್ವ ಸಿದ್ಧಾಂತಗಳು ವ್ಯಕ್ತಿ

ಶುದ್ಧಿಯ ಬಗೆಗೆ ಒತ್ತು ಕೊಟ್ಟು ಸಮಾಜ ಶುದ್ಧಿಯನ್ನು ಉಪೇಕ್ಷಿಸಿದರೆ, ಆಧುನಿಕ ಸಿದ್ಧಾಂತಗಳು ಸಮಾಜ ಶುದ್ಧಿಯ ಕಡೆಗೆ ಒತ್ತುಕೊಟ್ಟು ವ್ಯಕ್ತಿ ಶುದ್ಧಿಯನ್ನು ಉಪೇಕ್ಷಿಸುತ್ತವೆ. ಬಸವ ಸಿದ್ಧಾಂತ ಮಾತ್ರ ವ್ಯಕ್ತಿ ಶುದ್ಧಿಯಲ್ಲಿ ಬಿಚ್ಚಿಕೊಂಡು ಸಮಾಜಶುದ್ಧಿಯಲ್ಲಿ ವಿಸ್ತಾರಗೊಳ್ಳುತ್ತದೆ. ವ್ಯಷ್ಟಿಯಿಂದ ಸಮಷ್ಟಿಯ ಅಭಿವೃದ್ಧಿಗಾಗಿ ಶ್ರಮಿಸಿದ ಬಸವಣ್ಣನವರ ಪಾತ್ರ ಅಗಾಧವಾದುದು. ಅದನ್ನು ಅಂದು ತಮ್ಮ ಮಹಾಮನೆ (ಅನುಭವ ಮಂಟಪ)ಯ ಮೂಲಕವಾಗಿ ಮಾಡಿ ಸಾಧಿಸಿದ ಪುಣ್ಯಪುರುಷರು. ಅಂತೆಯೇ ಅವರು ಮಹಾಮಾನವ ಜಗಜ್ಯೋತಿಯೆನಿಸಿಕೊಂಡರು. ಇದರ ಜೊತೆಗೆ 'ದಯವೇ ಧರ್ಮ ಮೂಲ, ಸತ್ಯವ ನುಡಿವುದೇ ಸ್ವರ್ಗ' ಎಂದು ಸಾರಿ ಸಾರಿ ಹೇಳಿ ಅದರಂತೆ ನಡೆದು ತೋರಿದ ಆಚಾರ್ಯ ಪುರುಷರು. ದೇವನ ಕೈಯಲ್ಲಿರುವ ದಂಡಿಗೆಯಾಗಿ; ಜೀವನವೆಲ್ಲಾ ಶಿವನಾದಮಯವಾಗಬೇಕೆಂದು ಹಂಬಲಿಸಿ ಹಾಡಿದ್ದಾರೆ. ಅವರದೊಂದು ವಚನದಲ್ಲಿ ಹೀಗಿದೆ

*ಎನ್ನ ಕಾಯವ ದಂಡಿಗೆಯ ಮಾಡಯ್ಯ*
*ಎನ್ನ ಶಿರವ ಸೋರೆಯ ಮಾಡಯ್ಯ*
*ಎನ್ನ ನರವ ತಂತಿಯ ಮಾಡಯ್ಯ*
*ಎನ್ನ ಬೆರಳ ಕಡ್ಡಿಯ ಮಾಡಯ್ಯ*
*ಬತ್ತೀಸ ರಾಗವ ಹಾಡಯ್ಯ*
*ಉರದಲೊತ್ತಿ ಬಾರಿಸು, ಕೂಡಲಸಂಗಮದೇವಾ.*

ಆ ದೇವನಲ್ಲಿ ಆರ್ತ ಭಕ್ತಿಯಿಂದ ಪ್ರಾರ್ಥಿಸಿಕೊಂಡು ಜಗದೇಳಿಗೆಗೆ ಹಗಲಿರುಳೂ ಚಿಂತಿಸಿದವರು. ತನ್ನ ಕಲ್ಯಾಣದ ಜೊತೆ ಜೊತೆಗೆ ವಿಶ್ವದ ಕಲ್ಯಾಣಕ್ಕಾಗಿ ಹಂಬಲಿಸಿದವರು. ವೈಯಕ್ತಿಕ ಸುಖವನ್ನೆಂದು ಬಯಸಿದವರಲ್ಲ. 'ನಾಳೆ ಬಪ್ಪುದು ನಮಗಿಂದೇ ಬರಲಿ-ಇಂದು ಬಪ್ಪುದು ನಮಗೀಗಲೇ ಬರಲಿ ಇದಕಾರಂಜುವರು-ಇದಕಾರಳುಕುವರು-ಜಾತಸ್ಯ ಮರಣಂ ಧ್ರುವಂ ಎಂದು ಹೇಳಿದ ಅಣ್ಣನವರು ಹಂಗಿನ ಬದುಕು ಬದುಕಲ್ಲವೆಂದಿದ್ದಾರೆ. ಅದಕ್ಕಾಗಿ ಮಾನವ ಜನ್ಮ ಸಿಗುವುದು ದುರ್ಲಭ. ವ್ಯರ್ಥವಾಗಿ ದೀರ್ಘಕಾಲ ಬದುಕುವುದಕ್ಕಿಂತ ಸಾರ್ಥಕವಾಗಿ ಸ್ವಲ್ಪಕಾಲ, ಕ್ಷಣಕಾಲ ಬದುವುದು ಲೇಸೆನ್ನುತ್ತಾರೆ. ಅವರದೊಂದು ವಚನ ಮಾನವನಿಗೆ ಕೊಟ್ಟಂತಹ ಸಂದೇಶ ವಿಂತಿದೆ-

ಹಾವು, ಹದ್ದು 'ಕಾಗೆ, ಗೂಗೆ ಅನಂತಕಾಲ ಬದುಕವೆ?
ಬೇಡೋ ಮಾನವ !
ಲೇಸೆನಿಸಿಕೊಂಡು ಬದುಕೋ ಮಾನವ-ಶಿವಭಕ್ತನಾಗಿ
ನಮ್ಮ ಕೂಡಲಸಂಗಮದೇವರ ಭಕ್ತಿವಿಡಿದು
ಐದು ದಿವಸವಾದರೂ ಬದುಕಿದರೆ ಸಾಲದೆ ?

ಹೇಡಿಯಾಗಿ ದೀರ್ಘಕಾಲ ಬದುಕಿದರೇನು ಪ್ರಯೋಜನ? ವೀರ ಧೀರನಾಗಿ ಶಿವಭಕ್ತನಾಗಿ ಕ್ಷಣಕಾಲ ಬದುಕಿದರೂ ಸಾಕು ಅದುವೇ ಸಾರ್ಥಕವೆನ್ನುತ್ತಾರೆ. ಭಕ್ತಿ ಪಂಥ, ಭಕ್ತಿ ಮಾರ್ಗವೇ ಆ ದೇವನನ್ನು ಕಾಣುವ, ಅವನಲ್ಲಿ ಒಂದಾಗುವ ಪರಿ. ಆತ ಎಲ್ಲಿಂಯೂ ಇಲ್ಲ. ನಿಮ್ಮ ನಿಮ್ಮ ಅಂತರಂಗದಲ್ಲಿಯೇ ಇದ್ದಾನೆ ಎಂದಿದ್ದಾನೆ. ನಿಮ್ಮ ಹೃದಯ ಮಂದಿರದಲ್ಲಿರುವ ಆತ್ಮನೇ ಪರಮಾತ್ಮ ಎಂದಿದ್ದಾರೆ. ಆತ್ಮಕ್ಕೆ ಯಾವ ಮಲಿನತೆ. ಅಂಟಿಕೊಳ್ಳದಂತೆ ಕಾಳಜಿ ವಹಿಸುವುದು ನಿಮ್ಮ ಧರ್ಮವೆಂದು ಹೇಳಿದ ಬಸವಣ್ಣನವರು-

*ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ*
*ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ*
*ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ !*

ಎಂದು ಹೇಳಿರುವರು. ದೇವಲೋಕವೆಂಬುದಾಗಲಿ - ಮರ್ತ್ಯಲೋಕವೆಂಬುದಾಗಲಿ ಬೇರೆಲ್ಲಿಯೂ ಇಲ್ಲ ಸತ್ಯ ನುಡಿಯುವುದು, ಅದರಂತೆ ಆಚರಣೆಗೆ ತರುವುದೇ ಸ್ವರ್ಗ ಲೋಕ. ಅಥವಾ ದೇವಲೋಕವಾಗಿದೆ. ಅಸತ್ಯ, ವಂಚನೆ, ಮೋಸ ಮುಂತಾದ ಸಲ್ಲದ ಕಾರ್ಯವೆಸಗಿದರೆ ಅದುವೇ ನರಕಲೋಕ ಅಥವಾ ಅನಾಚಾರವೇ ನರಕವೆನ್ನುತ್ತಾರೆ. ಅಂದರೆ ಭಕ್ತನಿಗಿರುವ ಈ ಸ್ಥಳವೇ ಅಥವಾ ಅಂಗಳವೇ ದೇವಲೋಕ ಇದುವೇ ಕಾಶೀ-ರಾಮೇಶ್ವರ-ವಾರಣಾಸಿ; ಭಕ್ತನ ಕಾಯವೇ ಅಥವಾ ಕಾಯಕವೇ ಕೈಲಾಸವೆಂದಿದ್ದಾರೆ. ಇದು ಸತ್ಯ ಕೂಡಲಸಂಗಮದೇವಾ ಎಂದು ಹೇಳಿ ಪ್ರತಿಜ್ಞೆ ಮಾಡಿ ಅದರಂತೆ ಆಚರಿಸಿದ ಮಹಾನುಭಾವಿಗಳು ಯಾವ ರೀತಿಯಾಗಿ ಹೇಳುತ್ತಿದ್ದರೋ ಆ ರೀತಿಯಾಗಿ ಜೀವನದಲ್ಲಿ ಅಳವಡಿಸಿಕೊಂಡ ಆಚಾರ್ಯಪುರುಷರಂತೆ; ಬಸವಣ್ಣನವರಂತೆ ಬಾಳಿದವರು ವಿರಳವೆಂದೇ ಹೇಳಬೇಕಾಗುತ್ತದೆ.

ಯುಗ ಪ್ರವರ್ತಕ ಬಸವಣ್ಣನವರ ಜೀವನ ಸಾಧನೆ ಮಾನವ ಕುಲಕ್ಕೇ ಮಾದರಿಯಾದುದು. ಅವರ ವಚನಗಳಂತೂ ತೀರ ಸರಳ ದೇವಭಾಷೆಯನ್ನು ಜನರ ಭಾಷೆಯನ್ನಾಗಿಸಿದವರು. ಅವರ ಸಹಸ್ರಗಟ್ಟಲೆ ಪ್ರಕಟಿತ ವಚನಗಳಲ್ಲಿಯೇ ಸಪ್ತಶೀಲ ತತ್ತ್ವ ಮತ್ತು ಮಾನವೀಯ ಮೌಲ್ಯ





ಗಳನ್ನು ಪ್ರತಿಪಾದಿಸುವ ವಿಶ್ವ ಸಂದೇಶವಾಗಿ ಸಾರಿದ ವಚನ ಹೀಗಿದೆ-

*ಕಳಬೇಡ, ಕೊಲಬೇಡ, ಹುಸಿಯನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ*
*ತನ್ನ ಬಣ್ಣಿಸಲು ಬೇಡ, ಇದಿರ ಹಳಿಯಲುಬೇಡ*
*ಇದೇ ಅಂತರಂಗ ಶುದ್ಧಿ; ಇದೇ ಬಹಿರಂಗ ಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ!*

ಇದೊಂದು ವಚನ ಸಾಕು ಬಸವಣ್ಣನವರ ಮಹಾಮಾನವತ್ವದ ತೇಜಸ್ಸಿಗೆ. ಈ ವಚನದ ಏಳು ತತ್ವಗಳನ್ನು ಯಾರಾದರೂ ಆಚರಣೆಗೆ ತಂದದ್ದಾದರೆ ಆತನೂ ಮಹಾಮಾನವನಾಗಬಲ್ಲನು. ಅಂಥ ಶಕ್ತಿ ಹೊಂದಿದ ಬಸವಣ್ಣನವರ ಒಂದೊಂದು ವಚನವೂ, ಮಹಾ ಚೇತನದ ಬಾಯಿಂದ ಬಂದ ಚೈತನ್ಯದ ಕಿಡಿಯಾಗಿದೆ. ಮಾಣಿಕ್ಯದ ದೀಪ್ತಿಯಂತಿರುವ ಅವರ ವಚನಗಳಲ್ಲಿ ಅನುಭವ ರಸಾಯಣವೇ ತುಂಬಿಕೊಂಡಿದೆ, ಈ ವಚನವೊಂದರಲ್ಲಿ ಮಾನವನು ಭವ್ಯ ಮಾನವನಾಗುವ ಮಾರ್ಗದರ್ಶಿಕೆ ಯಿದ್ದಂತೆ ಮತ್ತು ಜೀವನ ಧರ್ಮದ ತಿರುಳು, ಸಾರವೂ ಆಗಿ ವಿಶ್ವ ಸಂದೇಶವಾಗಿದೆ. ಯಾವ ಬೃಹತ್ ಗ್ರಂಥವನ್ನೋದುವ ಅಗತ್ಯವಿಲ್ಲ. ಈ ವಚನ ಪಾಲಿಸಿದರೆ ಸಾಕು, ಮೋಕ್ಷ ಪ್ರಾಪ್ತವಾಗುತ್ತದೆ. ಬಸವಣ್ಣನವರು ಬೀರಿದ ಈ ವಿಶ್ವಸಂದೇಶದನುಗುಣವಾಗಿ ೧೨ನೆಯ ಶತಮಾನದ ಅಸಂಖ್ಯಾತ ಶಿವಯೋಗಿಗಳು, ನೂರೊಂದು ವಿರಕ್ತರು, ೭೭೦ ಗಣಂಗಳವರಾಗಿ ಹೋಗಿದ್ದಾರೆ. ಇಂದಿನ ಪ್ರಸ್ತುತ ಯುಗದಲ್ಲಿಯೂ ಬಂತನಾಳ ಶಿವಯೋಗಿಗಳು, ಬಿಳ್ಳೂರ ಅಜ್ಜನವರೂ, ಭಾಲ್ಕಿಯ ಪಟ್ಟದ್ದೇವರು, ಅಥಣಿಯ ಮುರುಘೇಂದ್ರ ಶಿವಯೋಗಿಗಳು, ಧಾರವಾಡದ ಮೃತ್ಯುಂಜಯಪ್ಪ ಮಹಾಂತಪ್ಪನವರುಗಳು, (ತೋಂಟದ ಸಿದ್ಧಲಿಂಗ ಯತಿಗಳು) ಇಲಕಲ್ಲ ಮಹಾಂತಶಿವಯೋಗಿ ಗಳು, ನಾಗನೂರು ರುದ್ರಾಕ್ಷಿ ಶ್ರೀಮಠದ ಶಿವಬಸವ ಮಹಾಸ್ವಾಮಿಗಳು, ಮುರುಗೋಡ-ಮಹಾಂತ ಶಿವಯೋಗಿ ಗಳು, ಸುತ್ತೂರು ಡಾ|| ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಬೇಲಿಮಠದ ಶ್ರೀ ಶಿವರುದ್ರಮಹಾ ಸ್ವಾಮಿಗಳು, ಬಿಜಾಪುರ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು ಮತ್ತು ಅಪರೂಪದ ಜಗತ್ತು ಕಂಡ ಮಹಾ ಜಂಗಮ ತುಮಕೂರು ಶ್ರೀ ಸಿದ್ಧಗಂಗಾ ಮಠದ ಅಧಿಪತಿಗಳಾದ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು, ಚಿತ್ರದುರ್ಗ ಬೃಹನ್ಮಠದ ಶ್ರೀಗಳಾದ ಮುರುಘ ರಾಜೇಂದ್ರ ಶರಣರು, ತರಳಬಾಳು ಜಗದ್ಗುರು ಪರಮಪೂಜ್ಯ ಶಿವಮೂರ್ತಿಮಹಾಸ್ವಾಮಿಗಳು- ಹೀಗೆ ಈ ಮಹಾತ್ಮರೆಲ್ಲರೂ ಬಸವ ಬೋಧನೆಯ ಹಾದಿಯಲ್ಲಿ ತತ್ತ್ವಗಳ ಅನುಷ್ಠಾನದಲ್ಲಿ ಮುಂಚೂಣಿಯಲ್ಲಿದ್ದಾರೆ. ಬಸವ ಪಥವೇ ನಮ್ಮ ಪಥವೆಂದೂ; ಬಸವಣ್ಣನೇ ಎನ್ನ ತಂದೆ-ತಾಯಿ, ಬಂಧು-ಬಳಗ ಎಂದು ಹೇಳಿ ಅದರಂತೆ ನಡೆಯುವವರಾಗಿದ್ದಾರೆ. ಇಂಥ ಬಸವಭಕ್ತರ ಸೇನೆ ಇನ್ನು ಸಿದ್ಧವಾಗಬೇಕಾಗಿದೆ. ಮನುಜರಾದ ನಾವೆಲ್ಲರೂ ಅವರ ದಿವ್ಯದರ್ಶನ ತತ್ತ್ವ ಮಾಡಿಕೊಂಡು ಪುನೀತರಾಗೋಣವೆಂದು ಶರಣು ಸಮರ್ಪಣೆ ಗೈಯ್ಯುವೆ.

ಸಕಲರಿಗೆ ಶರಣು ಶರಣಾರ್ಥಿಗಳು.

❋

## ನವ್ಯ ವಚನಗಳು

ಆಗು ಹೀಗುಗಳಿಗಾಗಿ
ಚಿಂತಿಸಲೇಕೆ
ಚಿಂತಿಸಿ ಕುಂದಲೇಕೆ ?
ಸೊರಗಲೇಕೆ ?
ಹಾಲು ಕುದಿದುದಲ್ಲದೆ
ಕೆನೆ ದೊರಕದಂತೆ
ಕಷ್ಟಗಳ ನಂತರವೇ
ಸುಖ ದೊರಕುವುದು ನೋಡಾ!

* * *

ಅನುವಂಶಿಕವಾಗಿ ಬಂದ ಆಸ್ತಿಯನು
ಆಲಸಿಯಾಗಿ ಅನುಭವಿಸುವವನು,
ಅನ್ಯರ ಹಂಗಿನಲಿ ಜೀವಿಸುವವನು
ತನ್ನ ಹೊಟ್ಟೆಗಾಗಿ ಕಷ್ಟಪಡುವ
ಇರುವೆಗಿಂತ ಕನಿಷ್ಠ, ನೋಡಾ !
ಬಸವಪ್ರಿಯ ಶ್ರೀವೀರಶಿವಲಿಂಗೇಶ್ವರ

* * *

ಗುರಿಯನು ಸೇರಲು,
ಝರಿಯಾಗಿ ಹುಟ್ಟಿ
ನದಿಯಾಗಿ ಹರಿಯಬೇಕಲ್ಲದೆ
ಒಸರಾಗಿ ಹುಟ್ಟಿ
ಕೆಸರಾಗಿ ನಿಲ್ಲಲುಬಾರದು !
ಬಸವಪ್ರಿಯ ಶ್ರೀ ವೀರಶಿವಲಿಂಗೇಶ್ವರ

-ಡಾ|| ಬಸವರಾಜ ಮೋದಿ ಎಂ.ಡಿ.,

# ಗಾಂಧೀಜಿ ನೆನಪು ಮತ್ತು ನಮ್ಮ ಶಿಕ್ಷಣ ವ್ಯವಸ್ಥೆ

–ಡಾ|| ಎಚ್. ತಿಪ್ಪೇರುದ್ರಸ್ವಾಮಿ

**ಈ**ಗಿನ ದಿನಗಳಲ್ಲಿ ಗಾಂಧೀಜಿ ಕೇವಲ ಒಂದು ನೆನಪಾಗಿ ಉಳಿದಿದ್ದಾರೆ. ನಾವು ಮಾಡುವುದೆಲ್ಲವನ್ನೂ ಗಾಂಧೀಜಿಯ ನೆನಪಿನಡಿಯಲ್ಲಿಯೇ, ಅವರ ಹೆಸರಿನಲ್ಲಿಯೇ ಮಾಡುತ್ತೇವೆ. ಮಾತೆತ್ತಿದರೆ ಗಾಂಧೀಜಿಯ ಆದರ್ಶಗಳನ್ನು ಉದ್ಧುದ್ದವಾದ ಮಾತುಗಳಲ್ಲಿ ಪಠಿಸುತ್ತೇವೆ. ಆದರೆ ಅದು ಆಚರಣೆಯಲ್ಲಿ ಇಳಿಯದೆ ಮಾತಿನ ಮಾಲೆಯ ಚಮತ್ಕಾರದ ಪ್ರದರ್ಶನವಾಗುತ್ತದೆ. ರಾಷ್ಟ್ರಪಿತ ಎಂದು ಕರೆದು, ಅದ್ದೂರಿಯಿಂದ ಅವರ ಜಯಂತಿಯನ್ನು ಆಚರಿಸುತ್ತೇವೆ. ಅವರ ತತ್ತ್ವಗಳ ಆಡಂಬರದ ಪ್ರದರ್ಶನದಲ್ಲಿಯೇ ಅವುಗಳ ಸಮಾಧಿ ಮಾಡುತ್ತೇವೆ. ಅದರ ಮೇಲೆ ಅವರ ಪ್ರತಿಮೆಯನ್ನೋ ಭಾವಚಿತ್ರವನ್ನೋ ಇಟ್ಟು ಮುಖಕ್ಕೆ ಮಂಗಳಾರತಿ ಎತ್ತುತ್ತೇವೆ. ಹೀಗೆ ಗಾಂಧಿಯ ಹೆಸರು, ನೆನಪು ಒಂದು ಅಲಂಕಾರ ಸಾಮಾಗ್ರಿಯಾಗಿ ಮಾತ್ರ ಉಳಿದಿದೆ; ಸಾಧನೆಯ ಸಾಮೂಹಿಕ ಶಕ್ತಿಯಾಗಿ ಅಲ್ಲ. ಈ ಮಾತು ಶಿಕ್ಷಣ ರಂಗಕ್ಕೂ ಅನ್ವಯಿಸುತ್ತದೆ.

ತಮ್ಮ ಕಾರ್ಯ ಚಟುವಟಿಕೆಗಳ ಪ್ರಾರಂಭದಿಂದಲೂ ಗಾಂಧೀಜಿ ಶಿಕ್ಷಣಕ್ಕೆ ಅತಿ ಹೆಚ್ಚಿನ ಮಹತ್ವವನ್ನು ಕೊಟ್ಟರು. ಸ್ವಾತಂತ್ರ್ಯ ಕೆಲವು ವರ್ಷ ತಡವಾಗಿ ಬಂದರೂ ಚಿಂತೆಯಿಲ್ಲ. ಆ ಸ್ವಾತಂತ್ರ್ಯವನ್ನು ನಿರ್ವಹಿಸುವುದಕ್ಕೆ ಸೂಕ್ತವಾದ ಶಿಕ್ಷಣ, ಬದಲಾವಣೆ ಈ ಕೂಡಲೇ ಆಗಬೇಕೆಂದು ಸ್ವಾತಂತ್ರ್ಯ ಪೂರ್ವದ ಭಾರತಕ್ಕೆ ಅವರು ಕರೆಕೊಟ್ಟರು. ಆದರೆ ಸ್ವಾತಂತ್ರ್ಯೋತ್ತರ ಭಾರತ ನಾಲ್ಕು ದಶಕಗಳನ್ನು ಕಳೆದಿದ್ದರೂ ನಮ್ಮ ಶಿಕ್ಷಣ ವ್ಯವಸ್ಥೆಯ ದಾಸ್ಯ ಮನೋಧರ್ಮ ಬದಲಾಗಿಲ್ಲ.

ಬಿಳಿಯರು ಹೋಗಿ ನಮ್ಮನ್ನು ನಾವೇ ಆಳಿಕೊಳ್ಳುವಂತಾದ ಮಾತ್ರಕ್ಕೆ ಅದು ಪೂರ್ಣ ಸ್ವಾತಂತ್ರ್ಯವಲ್ಲ. ಪೂರ್ಣ ಸ್ವಾತಂತ್ರ್ಯಕ್ಕೆ ಅದು ಅನಿವಾರ್ಯವಾದ ಮೊದಲ ಅವಶ್ಯಕತೆ ಎಂಬುದನ್ನು ಗಾಂಧೀಜಿ ಸಾರಿ ಸಾರಿ ಹೇಳಿದರು. ಎಲ್ಲ ಸಾಧನೆಗಳಿಗೂ ರಾಜಕೀಯ ಸ್ವಾತಂತ್ರ್ಯ ತಳಹದಿ, ನಿಜ. ಆದರೆ ಅದು ಪೂರ್ಣಸೌಧವಲ್ಲವೆಂಬುದನ್ನು ಮರೆತು ನಮಗೆ ರಾಜಕೀಯವೇ ಸರ್ವಸ್ವವೆಂಬಂತಾಯಿತು. ಇದರಿಂದ ಸಾಮಾಜಿಕ ಜೀವನದ ಬದಲಾವಣೆಗೆ ನಾವು ತೊಡಗಲೇ ಇಲ್ಲವೆಂದು ಅರ್ಥವಲ್ಲ. ಆ ಪ್ರಯತ್ನಗಳೂ ನಡೆದುವು. ಆದರೆ ಅವು ಯಶಸ್ವಿಯಾಗುವಂತಹ ಮೂಲಭೂತ ಬದಲಾವಣೆ ಆಗಲಿಲ್ಲ. ಅದು ಸಾಮಾಜಿಕ ದೃಷ್ಟಿ, ಧ್ಯೇಯ, ಧೋರಣೆಗಳಲ್ಲಿ ಆಗಬೇಕಾದ ಬದಲಾವಣೆ. ಇದು ಶಿಕ್ಷಣದ ಪರಿವರ್ತನೆಯಿಂದ ಮಾತ್ರ ಸಾಧ್ಯ ಎಂದು ಗಾಂಧೀಜಿ ನಂಬಿದ್ದರು. ಅಂತಹ 'ಜೀವನ ಶಿಕ್ಷಣ'ದ ಕನಸನ್ನು ಕಂಡಿದ್ದರು.

ಮೇಲೆ ನಾವು ಫಲವನ್ನು ಬಯಸಬೇಕಾದರೆ ಬೇರನ್ನು ಪೋಷಿಸಬೇಕು. ಎಲ್ಲ ಸಾಮಾಜಿಕ ಫಲಗಳಿಗೂ ತಾಯಿಬೇರು ಶಿಕ್ಷಣ. ಆ ಬೇರಿನ ಮೂಲಕ ವಿಷವನ್ನೂಡಿಸಿದರೆ ಮೇಲೆ ಅಮೃತ ಫಲಗಳು ದೊರೆಯಲಾರವು. ಬಿತ್ತಿದುದನ್ನು ಬೆಳೆಯಲೇ ಬೇಕಾಗುತ್ತದೆ. ಹೊರಗೆ ಎಷ್ಟೇ ದೊಡ್ಡ ಆದರ್ಶಗಳನ್ನು ಡಂಗುರ ಹೊಡೆದು ಸಾರಿದರೂ, ದಿನದಿನವೂ ಮಕ್ಕಳಿಗೆ ನಾವು ಕೊಡುತ್ತಿರುವ ಶಿಕ್ಷಣ ಮೌಲ್ಯಗಳು ಕಾರ್ಯತಃ ಅದಕ್ಕೆ ವಿರುದ್ಧವಾಗಿದ್ದರೆ, 'ಹೆಗ್ಗಣವನಿಕ್ಕಿ ನೆಲಗಟ್ಟ ಮುಚ್ಚಿದಂತೆ' ಆಗುವುದು. ಹೆಗ್ಗಣಗಳು ಒಳಗೇ ಕೊರೆಯುತ್ತವೆ. ಸೌಧ ಕುಸಿಯುತ್ತದೆ. ಇದುವರೆಗೆ ನಾವು ಬೆಳೆಸಿಕೊಂಡು ಬಂದ ಶಿಕ್ಷಣ ವ್ಯವಸ್ಥೆ ಇದಕ್ಕೆ ಒಳ್ಳೆಯ ಉದಾಹರಣೆ.

ಶಿಕ್ಷಣ ಕ್ಷೇತ್ರದಲ್ಲಿ ನಾವೂ ಏನೂ ಪ್ರಗತಿಯನ್ನು ಸಾಧಿಸಿಲ್ಲ ಎಂದಲ್ಲ. ನಮ್ಮ ದೇಶದಲ್ಲಿ ಮೊಟ್ಟ ಮೊದಲ ಬಾರಿಗೆ ಸಾಮೂಹಿಕ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿದ್ದೇವೆ. ಇದು ಆಂಗ್ಲರ ಪ್ರಭಾವದಿಂದ ಬಂದ ಬಹು ದೊಡ್ಡ ಕೊಡುಗೆ. ಎಲ್ಲರಿಗೂ ವಿದ್ಯಾಭ್ಯಾಸ ಎನ್ನುವುದನ್ನು ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಮೊದಲಿನಿಂದಲೂ ನಾವು ನಂಬಿದವರಲ್ಲ. ಅವರವರು ಅವಲಂಬಿಸಿದ ವೃತ್ತಿಯನ್ನೇ ಮುಂದುವರೆಸಿ ವೃತ್ತಿ ಶಿಕ್ಷಣವನ್ನಷ್ಟೇ ಬೆಳೆಸಿ ಆ ಮೂಲಕ ಸಾಮಾಜಿಕ ತಾರತಮ್ಯವನ್ನು ಉಳಿಸಿಕೊಂಡೇ ಬಂದ ನಮ್ಮ ಸಮಾಜಕ್ಕೆ, ಆಂಗ್ಲ ವಿದ್ಯಾಭ್ಯಾಸ ಹೊಸ ದಿಗಂತಗಳನ್ನು ಪರಿಚಯಿಸಿತು. ಹೊಸ ಯುಗವೊಂದನ್ನು ಪ್ರಾರಂಭಿಸಿತು, ಸಾರ್ವತ್ರಿಕವಾದ ಕಡ್ಡಾಯ ವಿದ್ಯಾಭ್ಯಾಸವನ್ನು ತಾತ್ತ್ವಿಕವಾಗಿಯಾದರೂ ಒಪ್ಪಿಕೊಂಡು ಅದರ ಆಚರಣೆಗೆ ಬದ್ಧರಾದೆವು. ಹಳ್ಳಿಹಳ್ಳಿಗಳಲ್ಲೂ ಶಾಲೆಗಳು ಪ್ರಾರಂಭವಾದವು.





ಇದು ನಿಂತ ನೀರಿನಂತಾಗಿದ್ದ ನಮ್ಮ ಸಮಾಜಕ್ಕೆ ಅತ್ಯಂತ ಅಗತ್ಯವಾಗಿದ್ದ ಸ್ವಾಗತಾರ್ಹ ಬದಲಾವಣೆಯಾಗಿತ್ತು. ಆದರೆ ಆ ಬೆಳವಣಿಗೆಗೆ ಸರಿಯಾದ ದಿಕ್ಕಿನಲ್ಲಿ ನಡೆಯುತ್ತಿದೆಯೇ ಎಂಬುದನ್ನು ಗಮನಿಸಲಿಲ್ಲ. ಇದರ ಅಪಾಯವನ್ನರಿತ ಗಾಂಧೀಜಿ ಮತ್ತೆ ಮತ್ತೆ ಎಚ್ಚರಿಸಿದರೂ ಅದೆಲ್ಲಾ ವಿಫಲವಾಯಿತು.

ಶಾಲಾ ಕಾಲೇಜುಗಳ ಸಂಖ್ಯೆಗಳೇನೋ ಬೆಳೆದುವು. ಗ್ರಾಮಾಂತರಗಳನ್ನು ಅವು ವ್ಯಾಪಿಸಿದವು. ಇಂದು ದೇಶದ ತುಂಬಾ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಿದ್ದೇವೆ. ಅತ್ಯಂತ ಉನ್ನತ ಮಟ್ಟದ ಶಿಕ್ಷಣದಲ್ಲಿಯೂ, ತಾಂತ್ರಿಕ ಶಿಕ್ಷಣದಲ್ಲಿಯೂ ಹಿಂದೆ ಬಿದ್ದಿಲ್ಲ. ನಮ್ಮ ಪ್ರತಿಭೆಯನ್ನು ಹೊರದೇಶಗಳಿಗೆ ರಫ್ತು ಮಾಡುವ ಸ್ಥಿತಿಯನ್ನು ತಲುಪಿದ್ದೇವೆ. ಇದೆಲ್ಲಾ ಸರಿಯೆ. ಆದರೆ ಈ ಶಿಕ್ಷಣ ತಂದುಕೊಡಬೇಕಾದ ಸಾಮಾಜಿಕ ಸ್ವಾಸ್ಥ್ಯ ಏಕೆ ನಿರ್ಮಾಣವಾಗಿಲ್ಲ? ಶಾಲಾ ಕಾಲೇಜುಗಳಲ್ಲಿ ಚಾಕು ಚೂರಿ ಚೈನುಗಳ ಸಂಸ್ಕೃತಿ ಬೆಳೆಯುತ್ತಿರುವುದೇಕೆ? ತಾವು ಓದಿದ ವಿದ್ಯಾಮಂದಿರಗಳ ಮೇಲೆಯೇ ವಿದ್ಯಾರ್ಥಿಗಳು ಕಲ್ಲು ತೂರುವುದೇಕೆ? ಅವುಗಳಿಗೆ ಬೆಂಕಿ ಹಚ್ಚುವುದೇಕೆ? ವಿಶ್ವವಿದ್ಯಾನಿಲಯಗಳು ರಣರಂಗಗಳಾಗುವುದೇಕೆ? ಇನ್ನೂ ಇಂತಹ 'ಏಕೆ'ಗಳ ಸಂಖ್ಯೆ ಬೆಳೆಯುತ್ತಿದೆ.

ಬಹುಕಾಲ ಸುಪ್ತವಾಗಿದ್ದ ಸಾಮೂಹಿಕ ಚೇತನವನ್ನು ಜಾಗ್ರತಗೊಳಿಸುವಾಗ, ಹಾಗೆ ಜಾಗ್ರತಗೊಂಡ ಸಮುದಾಯದ ಸುಮುಖವಾದ ಬೆಳವಣಿಗೆಗೆ ಅಗತ್ಯವಾದ ವಿಧಾಯಾತ್ಮಕ ದೃಷ್ಟಿಯನ್ನು, ರಚನಾತ್ಮಕ ಪರಿಸರವನ್ನೂ, ಶಿಕ್ಷಣ ರೂಪಿಸಲಿಲ್ಲ. ಆಂಗ್ಲ ವಿದ್ಯಾಭ್ಯಾಸದ ಅನುಕರಣಶೀಲತೆಯನ್ನೇ ಅವಲಂಬಿಸಿದೆವು; ಅಂದು ಆಂಗ್ಲರು ನಮ್ಮ ದೇಶದಲ್ಲಿ ಪ್ರಾರಂಭಿಸಿದ ವಿದ್ಯಾಭ್ಯಾಸ ಅಂದಿನ ಅವರ ಅಗತ್ಯವನ್ನು ಪೂರೈಸುವ ಸ್ವರೂಪದ್ದಾಗಿತ್ತು. ರಾಜಕೀಯ ದಾಸ್ಯದ ಜೊತೆಗೆ ಬೌದ್ಧಿಕ ಮತ್ತು ಸಾಂಸ್ಕೃತಿಕ ದಾಸ್ಯವನ್ನೂ ಶಾಶ್ವತಗೊಳಿಸುವ ಯೋಜಿತ ವ್ಯವಸ್ಥೆ ಅದಾಗಿತ್ತು. ಇದನ್ನು ಮನಗಂಡ ಗಾಂಧೀಜಿ ಬಹಳ ಖಚಿತವಾದ ಮಾತುಗಳಲ್ಲಿ ಆ ಅಪಾಯವನ್ನು ಎತ್ತಿ ತೋರಿಸಿದರು. ಸ್ವಾತಂತ್ರ್ಯ ಹೋರಾಟ ಜೊತೆ ಜೊತೆಯಲ್ಲಿಯೇ ಈ ವ್ಯವಸ್ಥೆಯ ವಿರುದ್ಧವೂ ಹೋರಾಟವನ್ನು ಗಾಂಧೀಜಿ ನಡೆಸುತ್ತಲೇ ಬಂದರು. ರಾಜಕೀಯ ಸ್ವಾತಂತ್ರ್ಯವೇನೋ ಲಭಿಸಿತು. ಆದರೆ ನಮ್ಮ ಶಿಕ್ಷಣ ಪರಕೀಯತೆ, ಪಾರತಂತ್ರ್ಯದಿಂದ ಪಾರಾಗಲಿಲ್ಲ. ನಮ್ಮ ಸಮಸ್ಯೆಗಳನ್ನು ನಮ್ಮ ನೆಲದಿಂದ ಪರಿಹರಿಸಿಕೊಳ್ಳಲು ಅಗತ್ಯವಾದ ಆತ್ಮವಿಶ್ವಾಸವನ್ನು ನಮ್ಮ ಶಿಕ್ಷಣ ವ್ಯವಸ್ಥೆ ನಮಗೆ ತಂದುಕೊಡಲೇ ಇಲ್ಲ. ನಮ್ಮ ಬುದ್ಧಿಯನ್ನು ಇಂಗ್ಲೆಂಡಿನಲ್ಲಿಯೋ, ಅಮೇರಿಕಾದಲ್ಲಿಯೋ ಅಡವಿಟ್ಟು, ಅವರ ಎಂಜಲನ್ನೇ ಇಲ್ಲಿ ತೀರ್ಥವೆಂದು ಸ್ವೀಕರಿಸುವ ಬೂಟಾಟಿಕೆಯೇ ಬೆಳೆದು ಬಂದಿತು. ರಷ್ಯಾ ದೇಶದ ಮಹತ್ತರವಾದ ಸಾಧನೆಗಳ ಜೊತೆಯಲ್ಲಿ ಇದನ್ನು ನಿಲ್ಲಿಸಿದಾಗ ನಮ್ಮ ಕುಬ್ಜತನ ಮನದಟ್ಟಾಗುತ್ತದೆ.

ದೀರ್ಘ ದಾಸ್ಯದ ನಂತರ ಸ್ವಾತಂತ್ರ್ಯದ ಹೊಸಯುಗಕ್ಕೆ ಕಾಲಿಟ್ಟ ಭಾರತದಂತಹ ವಿಸ್ತಾರವಾದ ಮತ್ತು ಬಹು ಭಾಷೆ, ಸಂಸ್ಕೃತಿಗಳನ್ನುಳ್ಳ ದೇಶವೊಂದು ಮೈಕೊಡವಿಕೊಂಡು ಮೇಲೆದ್ದಾಗ ಎದುರಿಸಬೇಕಾದ ಎಲ್ಲ ಸಮಸ್ಯೆಗಳಿಗೂ ಉತ್ತರವನ್ನು ಕಂಡುಕೊಳ್ಳುವಂತಹ ಶಿಕ್ಷಣ ವ್ಯವಸ್ಥೆ ನಮಗೆ ಬೇಕಾಗಿತ್ತು. ಗಾಂಧೀಜಿ ಅದಕ್ಕೆ ಅಗತ್ಯವಾದ ಹಿನ್ನೆಲೆಯನ್ನು ಪ್ರತಿಪಾದಿಸಿದರು. ಅಂದಿನ ಶಿಕ್ಷಣ ಪದ್ಧತಿಯ ಎಲ್ಲ ದೋಷಗಳನ್ನೂ ಎತ್ತಿ ತೋರಿಸಿ 'ನಯೀ ತಾಲೀಂ' ಎಂದು ಅವರು ಕರೆದ ಮೂಲಭೂತ ಶಿಕ್ಷಣದ ಅಗತ್ಯವನ್ನು ಮನದಟ್ಟು ಮಾಡಿಕೊಡಲು ಪ್ರಯತ್ನಿಸಿದರು. ಪರಕೀಯ ಭಾಷೆಯಿಂದ ಕಲಿತ ಗಿಳಿಪಾಠದಂತಹ ಪುಸ್ತಕ ಪಾಂಡಿತ್ಯವನ್ನೇ ದೊಡ್ಡದು ಮಾಡಿ ಸ್ವಾವಲಂಬನೆಯನ್ನೂ ಆತ್ಮವಿಶ್ವಾಸವನ್ನೂ ಅಳಿಸಿ ಹಾಕುವ ಮತ್ತು ಹಣವನ್ನೇ ಪರಮಮೌಲ್ಯವನ್ನಾಗಿಸುವ ಶಿಕ್ಷಣ ವ್ಯವಸ್ಥೆಯನ್ನು ಗಾಂಧೀಜಿ ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದರು. ದೈಹಿಕ ಶ್ರಮದ ದುಡಿಮೆಯನ್ನು ಗೌರವಿಸುವ ಮತ್ತು ವ್ಯಕ್ತಿಯ ಸಮಗ್ರ ಶಕ್ತಿಗಳ ವಿಕಾಸಕ್ಕೆ ಕಾರಣವಾಗುವ ಪೂರ್ಣದೃಷ್ಟಿಯ ಶಿಕ್ಷಣವನ್ನು ತಮ್ಮ ಜೀವನದುದ್ದಕ್ಕೂ ಅದೊಂದು ವ್ರತವೆಂಬಂತೆ ರೂಪಿಸಿಕೊಂಡು ಬಂದರು. ಆದರೆ ಅವರ ಹೆಸರನ್ನು ಮಾತ್ರ ಉಳಿಸಿಕೊಂಡು ಅವರ ಆಶಯ–ಆದರ್ಶಗಳೆಲ್ಲವನ್ನೂ ಗಾಳಿಗೆ ತೂರುವುದು ನಮ್ಮ ವ್ರತವಾಯಿತು. ಅದರ ಫಲವನ್ನು ಈಗ ಅನುಭವಿಸುತ್ತಿದ್ದೇವೆ.

ಆದರೆ ಈಗಲೂ ನಾವು ಪಾಠವನ್ನು ಕಲಿತಂತೆ ಕಾಣುತ್ತಿಲ್ಲ. ಹಳೆಯದನ್ನೇ ಉಳಿಸಿಕೊಂಡು, ಬೆಳೆಸಿಕೊಂಡು ಬರುತ್ತಿದ್ದೇವೆ. ಬದಲಾವಣೆಯ ಪ್ರಯತ್ನಗಳೇ ನಡೆದಿಲ್ಲವೆಂದಲ್ಲ; ಸ್ವಲ್ಪ ಹೆಚ್ಚೇ ಎನ್ನುವಷ್ಟು ಬದಲಾವಣೆಗಳನ್ನು

ಮತ್ತೆ ಮತ್ತೆ ಮಾಡಿದ್ದೇವೆ. ಆದರೆ ಅದು ಮೂಲ ಚೌಕಟ್ಟನ್ನು ಬದಲಾಯಿಸಿದೆ. ಅಲ್ಲಿ ಇಲ್ಲಿ ಕಿತ್ತು ಕತ್ತರಿಸಿ ಸೇರಿಸಿದ ತೇಪೆ ಕೆಲಸವಾಗಿದೆ. ಶಿಕ್ಷಣದ ಮೂಲಭೂತ ಧೋರಣೆಯಾಗಲೀ, ಕಾರ್ಯ ವಿಧಾನದ ಕೇಂದ್ರ ಬಿಂದುವಾಗಲೀ ಬದಲಾಗಲಿಲ್ಲ, ನಮ್ಮ ಶಿಕ್ಷಣದ ವ್ಯವಸ್ಥೆ ದೇಶದ ಸಮಸ್ಯೆಗಳನ್ನೆದುರಿಸುವ ರಚನಾತ್ಮಕ ಶಕ್ತಿಯಾಗುವುದರ ಬದಲು ಜನರನ್ನು ಪರಾವಲಂಭಿಗಳನ್ನಾಗಿಸುವ ಸಾಧನವಾಗಿ ಪರಿಣಮಿಸಿದೆ. ನಾನಾ ಅಂತರಗಳನ್ನು ಸೃಷ್ಟಿಸುತ್ತಿದೆ. ಹಿಂದೆ ಸಂಸ್ಕೃತದ ಮೂಲಕ ಸಾಧಿಸಿದುದನ್ನು ಈಗ ಇಂಗ್ಲೀಷ್ ಮೂಲಕ ಸಾಧಿಸುವ ನೂತನ ಪುರೋಹಿತ ಶಾಹಿಯಾಗಿದೆ. ಇದರ ಜೊತೆಯಲ್ಲಿ ಹಿಂದಿಯನ್ನು ಹಿಂಬಾಗಿಲಿನಿಂದ ತರುವ ಗೊಂದಲದ ಪ್ರಯತ್ನವೂ ನಡೆಯುತ್ತಿದೆ. ನವೋದಯ ಶಾಲೆಗಳ ಇತ್ತೀಚಿನ ಕಲ್ಪನೆಯಲ್ಲಿ ಹಳ್ಳಿಗಳಲ್ಲಿಯೂ ಹೊಸ ವರ್ಗವೊಂದನ್ನು ಸೃಷ್ಟಿಸುವ ಅಪಾಯವನ್ನು ಗುರುತಿಸಬಹುದಾಗಿದೆ.

ಹೀಗೆ ನಮ್ಮ ಶಿಕ್ಷಣ ವ್ಯವಸ್ಥೆ ನಿಜವಾದ ಅರ್ಥದಲ್ಲಿ ನಮ್ಮದಾಗಿಲ್ಲ. ಗಾತ್ರದಲ್ಲಿ ಬೆಳೆದಿದೆ, ಆದರೆ ಅದರ ಸೂತ್ರ ಅನುಕರಣಶೀಲವಾಗಿಯೇ ಉಳಿದಿದೆ. ಆದ್ದರಿಂದಲೇ ಇಂಗ್ಲೀಷ್ ಮಾಧ್ಯಮದ ನರ್ಸರಿ ಶಾಲೆಗಳು ನಾಯಿ ಕೊಡೆಗಳಂತೆ ತಲೆಯೆತ್ತುತ್ತಿವೆ. ಆ ಹಂತದಿಂದಲೇ ಮಕ್ಕಳನ್ನು ಪರಕೀಯರನ್ನಾಗಿಸುವ ಪ್ರಯತ್ನದಲ್ಲಿ ಸ್ಪರ್ಧೆಯನ್ನು ಕಾಣುತ್ತೇವೆ. ಹಣವನ್ನು ಹೆಚ್ಚಾಗಿ ಚೆಲ್ಲಿದಷ್ಟು ಉತ್ಕೃಷ್ಟ ಶಿಕ್ಷಣವೆಂಬ ಭ್ರಮೆ ಬೆಳೆಯುತ್ತಿದೆ. ಹಾಗೆ ಚೆಲ್ಲಿದ ಹಣವನ್ನು ಬಡ್ಡಿ ಸಮೇತ ವಸೂಲು ಮಾಡುವ ಸೇಡಿನ ಮನೋಭಾವದಿಂದಲೇ ನಮ್ಮ ವಿದ್ಯಾವಂತರು ಸರ್ಕಾರಿ ನೌಕರಿಗಳನ್ನೋ, ಸಾರ್ವಜನಿಕ ಜೀವನವನ್ನೋ ಪ್ರವೇಶಿಸುತ್ತಾರೆ. ನಮ್ಮ ಶಿಕ್ಷಣ ವ್ಯವಸ್ಥೆಯ ಅಪಾಯಕಾರಿಯಾದ ಈ ಹುತ್ತಗಳು ಸಮಾಜದ ಎಲ್ಲಾ ಸ್ತರಗಳನ್ನು ವ್ಯಾಪಿಸುತ್ತಿವೆ. ಇದರಿಂದ ನಮ್ಮ ಸಾಮಾಜಿಕ ಮೌಲ್ಯಗಳೇ ತಲೆಕೆಳಕಾಗಿ ಹಣ ಮತ್ತು ಅಧಿಕಾರಗಳ ಅಸಹ್ಯ ವಿಜ್ರಂಭಣೆ ತಾಂಡವವಾಡುತ್ತಿದೆ.

ಇದೊಂದು ವಿಷವೃತ್ತ, ರಾಜಕೀಯ, ಸಾಮಾಜಿಕ, ಧಾರ್ಮಿಕ ಈ ಎಲ್ಲ ವಲಯಗಳನ್ನು ಕಲುಷಿತ ಗೊಳಿಸಿರುವ ಇದನ್ನು ಎಲ್ಲಿಯಾದರೂ ಒಂದು ಕಡೆ ಒಡೆಯಬೇಕು; ಹಾಗೆ ಅದನ್ನು ಒಡೆಯುವ ಸಾಧನವಾಗಬೇಕಾದ ಶಿಕ್ಷಣವೇ ಅದನ್ನು ಪೋಷಿಸಿಕೊಂಡು ಬರುತ್ತಿರುವುದು ನಮ್ಮ ಎಲ್ಲ ಸಮಸ್ಯೆಗಳ ಮೂಲ. ಗಾಂಧೀಜಿಯ ನೆನಪು ಕೇವಲ ನೆನಪಾಗಿ ಉಳಿಯದೆ, ಅವರ ಆದರ್ಶ ಆಶಯಗಳನ್ನು ಕಾರ್ಯಗತಗೊಳಿಸುವ ಕ್ರಿಯಾತ್ಮಕ ಶಕ್ತಿಯಾದಾಗ ಮಾತ್ರ ಇದನ್ನು ಪರಿಹರಿಸಿಕೊಳ್ಳಬಹುದೆಂಬುದನ್ನು ಈಗಲಾದರೂ ನಾವು ಕಂಡುಕೊಳ್ಳಬೇಕಾಗಿದೆ.

*

## ಗಾಂಧೀಜಿಯ ನುಡಿಮುತ್ತುಗಳು

ತಪ್ಪು ಮಾಡುವುದು ಅದು ಎಷ್ಟೇ ಪ್ರಮಾದಕರವಾದರೂ, ಮಾನವತೆಯ ಲಕ್ಷಣ. ಮಾಡಿದ ತಪ್ಪನ್ನೇ ಪುನಃ ಮಾಡದೆ, ಅದನ್ನು ತಿದ್ದಿಕೊಳ್ಳುವ ಸಂಕಲ್ಪ ವಿದ್ದರೆ ಮಾತ್ರ ಅದು ಮಾನವತೆಯೆನಿಸಿಕೊಳ್ಳುತ್ತದೆ. ಈ ಭರವಸೆ ಸಂಪೂರ್ಣವಾಗಿ ಕೈಗೂಡಿದರೆ ತಪ್ಪು ಮರೆತುಹೋಗುತ್ತದೆ.

* * *

ಧರ್ಮ ಬೇರೆಯಲ್ಲ, ರಾಜಕಾರಣ ಬೇರೆಯಲ್ಲ. ವ್ಯಾಖ್ಯಾನ ಮಾಡಲು ಅವು ತತ್ವಗಳಲ್ಲ. ಅವು ಆಚರಣೆಗೆ ತರಬೇಕಾದಂತಹವು. ಸತ್ಯ ನಮ್ಮ ಜೀವನದಲ್ಲಿ, ನಮ್ಮ ಸಹಜ ಆಲೋಚನೆಯಲ್ಲಿ ಪ್ರಧಾನವಾಗಿ ಭಾಗವಹಿಸಬೇಕು.

* * *

ಉದ್ವಿಗ್ನ ಮನಸ್ಸಿಗೆ ಶಾಂತಿಯನ್ನೊದಗಿಸಿ, ವಿದ್ಯಾರ್ಥಿಗಳ ಚಂಚಲ ಮನಸ್ಸಿಗೆ ಸ್ಥಿಮಿತವನ್ನು ತಂದು, ಅವರ ಜೀವನವನ್ನು ಆಧ್ಯಾತ್ಮಿಕತೆಗೆ ಪರಿವರ್ತಿಸುವಲ್ಲಿ ಪ್ರಾರ್ಥನೆ ಸಹಾಯಕಾರಿ.

* * *

ವ್ಯಕ್ತಿ ಎಷ್ಟು ಅಲ್ಪನಾದರೂ ಅವನ ಆತ್ಮಶಕ್ತಿ ಜಗತ್ತನ್ನೇ ಅಡಿಸಬಲ್ಲದು. ಇಂತಹ ಆತ್ಮಶಕ್ತಿಯನ್ನು ಬೆಳೆಸಿಕೊಳ್ಳುವುದು ಎಲ್ಲರಿಗೂ ಸಾಧ್ಯ.

* * *

ಪೂರ್ಣ ಸತ್ಯವನ್ನರಿಯುವುದು ಮನುಷ್ಯ ಮಾತ್ರನಿಗೆ ಸಾಧ್ಯವಿಲ್ಲ. ತಾನು ಕಂಡ ಸತ್ಯದೆತ್ತರಕ್ಕೆ ಬಾಳುವುದು ಅವನ ಕರ್ತವ್ಯ. ಹಾಗೆ ಮಾಡುವಾಗ, ಅವನು ಅತ್ಯಂತ ಪರಿಶುದ್ಧವಾದ ಮಾರ್ಗವನ್ನೇ, ಅಂದರೆ ಅಹಿಂಸೆಯನ್ನೇ ಬಳಸಬೇಕು.

* * *





## ಶೀಗೆ ಹುಣ್ಣಿಮೆ

–ಶಕುಂತಲಾ ಯು. ಹೊನ್ನಾಳಿ, ಶಿವಮೊಗ್ಗ ಜಿಲ್ಲೆ.

ಆಶ್ವೀಜ ಶುದ್ಧ ಪೂರ್ಣಿಮಾ ಶೀಗೆ ಅಥವಾ ಸೀಗೆ ಹುಣ್ಣಿಮೆ. ಮುಂಗಾರು ಮಳೆ ಹುಲುಸಾಗಿ ಬಂದಿರುತ್ತದೆ. ರೈತ ಹುಣ್ಣಿಮೆಗೆ ಐದು ದಿನ ಮುಂಚೆ ಸೀಗವ್ವನನ್ನು ಕರೆತರುತ್ತಾನೆ. ಸೀಗವ್ವನನ್ನು ಕರೆತರುವ ಸಂಪ್ರದಾಯವಿದೆ. ಹಿರಿಯ ಮುತ್ತೈದೆಯರು ಕುಂಬಾರನಲ್ಲಿಗೆ ಹೋಗಿ ತಾವು ತಂದ ಜೋಳ ಅಥವ ಅಕ್ಕಿ ಅಥವಾ ಪಚ್ಚೆಯಿಂದ ಕುಂಬಾರನ ಪತ್ನಿಯ ಉಡಿ ತುಂಬುತ್ತಾರೆ. ಆಗ ಅವರು ಎರಡು ಸೀಗವ್ವ ಗಳನ್ನು ಕೊಡುತ್ತಾರೆ ಮಣ್ಣಿನ ಮೂರ್ತಿಗಳು. ಇವುಗಳನ್ನು ಆರತಿ ತಟ್ಟೆಯಲ್ಲಿಟ್ಟು ಸಂಪ್ರದಾಯದ ಹಾಡು ಹಾಡುತ್ತ ಮನೆಗೆ ಬರುತ್ತಾರೆ. ಆರತಿ ಬೆಳಗುತ್ತಾರೆ. ಆರತಿ ಪದ ಹೇಳುತ್ತಾರೆ.

ಹುಣ್ಣಿಮೆಯ ದಿನ ಹೊಸ ಧಾನ್ಯಗಳಿಂದ ಅಡುಗೆ ಮಾಡುತ್ತಾರೆ. ಎಳ್ಳು ಹಚ್ಚಿದ ಸಜ್ಜೆ, ರೊಟ್ಟಿ, ಜೋಳದ ಕಡುಬು, ಗೋಧಿಹುಗ್ಗಿ, ಹೋಳಿಗೆ, ಕರ್ಜಿಕಾಯಿ, ಅನ್ನ, ಸಾರು, ಮೊಸರನ್ನ, ಚಿತ್ರಾನ್ನ ಹೀಗೆ ವಿಧವಿಧದ ಅಡಿಗೆ ಮಾಡುತ್ತಾರೆ. ಅಲ್ಲಿಂದ ಹೊಲಕ್ಕೆ ಹೋಗಿ ಮರದ ಕೆಳಗೆ ಐದುಕಲ್ಲು (ಪಾಂಡವರು) ಮತ್ತು ಒಂದು ಕಲ್ಲು (ಕುಂತಿ ದೇವಿ) ಇಟ್ಟು ಪೂಜಿಸುತ್ತಾರೆ. ನಂತರ ಅಡಿಗೆಯಲ್ಲಿ ಎಲ್ಲವೂ ಬಂದಿದ್ದನ್ನು ತೆಗೆದುಕೊಳ್ಳುತ್ತಾರೆ. ಎಲ್ಲವನ್ನೂ ಕಲೆಸಿ ಹೊಲದ ತುಂಬಾ ಚೆಲ್ಲುತ್ತಾರೆ. ಇದನ್ನು 'ಚರಗ ಚೆಲ್ಲುವುದು' ಎನ್ನುತ್ತಾರೆ. ಮನೆಗೆ ಮರಳುವ ಮುನ್ನ ಸೀಗವ್ವನನ್ನು ಬನ್ನಿಯ ಮರವಿದ್ದರೆ ಅದರ ಕಟ್ಟೆಯ ಮೇಲೆ, ಅಥವಾ ಹೊಲದ ಮೂಲೆಯೊಂದರಲ್ಲಿ ಇಟ್ಟು ಮನೆಗೆ ಮರಳುತ್ತಾರೆ.

ಇಲ್ಲಿ ಸೀಗವ್ವ ಎಂದರೆ ಭೂಮಿ ತಾಯಿ, ಶೀಗೆ ಹುಣ್ಣಿಮೆಯನ್ನು ಭೂಮಿ ಹುಣ್ಣಿಮೆ ಎಂದೂ ಕರೆಯುತ್ತಾರೆ. ಬಂಧು ಮಿತ್ರರಾದಿಯಾಗಿ ಎಲ್ಲರೂ ಹುಣ್ಣಿಮೆ ಊಟದಲ್ಲಿ ಪಾಲುಗೊಳ್ಳುತ್ತಾರೆ.

ಮುಂದೆ ಸುಗ್ಗಿ ಮಾಡುವಾಗ ಸೀಗವ್ವನನ್ನು ಇಟ್ಟು ಐದು ಜೋಳದ ತೆನೆಯುಳ್ಳ ದಂಟು ನೆಟ್ಟು, ಪಾಂಡವರನ್ನು ಇಟ್ಟು ಪೂಜಿಸಿ ಆರತಿ ಬೆಳಗಿ ನೈವೇದ್ಯ ಮಾಡುತ್ತಾರೆ.

ಶೀಗೆ ಹುಣ್ಣಿಮೆಯ ಧಾರ್ಮಿಕ ಸಂಪ್ರದಾಯಗಳಿಗೆ ಪೌರಾಣಿಕ ಹಿನ್ನಲೆಯುಂಟು.

ಮಹಾಭಾರತದಲ್ಲಿ ಪಂಚಪಾಂಡವರು ಹನ್ನೆರಡು ವರ್ಷ ವನವಾಸ ಮುಗಿಸಿ, ಒಂದು ವರ್ಷ ಅಜ್ಞಾತವಾಸ ಮುಗಿಸಿ ವಿಜಯದಶಮಿಯಂದು ದೇವಿಯನ್ನು ಪ್ರಾರ್ಥಿಸಿ ಬನ್ನಿ ಗಿಡದಲ್ಲಿ ಅಡಗಿಸಿ ಇಟ್ಟಿದ್ದ ತಮ್ಮ ಆಯುಧಗಳನ್ನು ಮರಳಿ ಪಡೆದರಂತೆ. ಆ ದಿನ ತಮ್ಮ ನಾಡಾದ ಹಸ್ತಿನಾವತಿಯ ಭೂಮಿಯ ಮೇಲೆ ಕಾಲಿರಿಸಿದ ದಿನ ಶೀಗೆ ಹುಣ್ಣಿಮೆ. ಅಂದಿನ ಅವರ ಪಾದಸ್ಪರ್ಶದಿಂದ ಪುನೀತಳಾದ ಭೂಮಾತೆ ಹಸಿರಿನಿಂದ ಕಂಗೊಳಿಸಿದಳಂತೆ. ಆ ಹಸಿರಿನ ಸಮೃದ್ಧಿಯ ಸಂಕೇತ ಶೀಗೆ ಹುಣ್ಣಿಮೆ. ಅದಕ್ಕಾಗಿ ಹುಣ್ಣಿಮೆಯ ದಿನ ರೈತರು ಭೂಮಿಯಲ್ಲಿ ಪಾಂಡವರ ಪೂಜೆ ಮಾಡುವರು.

ಕವಿ ಆನಂದ ಕಂದರು ತಮ್ಮ ಪದ್ಯದಲ್ಲಿ
ಹೋಗೋಣ ಬಾ ಯಕ್ಕ ನಮ್ಹೊಲಾಕ್ಕ
ಪಂಚ ಪಾಂಡವರ ಪೂಜಾಕ
ಹೊಲದಾಗ ಬೆಳಸಿ ತಿನ್ನಾಕ
.......... ಹೋಗೋಣ ಬಾ ಯಕ್ಕ ನಮ್ಹೊಲಾಕ್ಕ.

ಹೊಲಗಳಿಗೆ ಚರಗಾ ಚಲ್ಲುವುದರಿಂದ ಫಲವತ್ತಾಗಿ ಬೆಳೆದು ನಿಂತ ಬೆಳೆ ಪಾಂಡವರ ಪೂಜೆಯೊಂದಿಗೆ ಇನ್ನಷ್ಟು ಸಮೃದ್ಧಿಯಾಗಿ ಬೆಳೆದು ಹಾಲು ಕಾಳಾಗಿ ಬೆಳೆಯಲಿ ಎಂಬ ಉದ್ದೇಶವಾಗಿದೆ.

ಹಸಿರಿನಿಂದ ಕಂಗೊಳಿಸುತ್ತಿರುವ ಪೈರುಗಳ ಮಧ್ಯೆ ಬಂಧು–ಬಾಂಧವರು ಸ್ನೇಹಿತರೊಂದಿಗೆ ಒಟ್ಟಾಗಿ ಕುಳಿತು, ಹಾಡು ಹೇಳುತ್ತ ಹಾಸ್ಯ ಮಾಡುತ್ತ, ಕಷ್ಟ ಸುಖ ವಿಚಾರಿಸುತ್ತ, ಊಟ ಮಾಡದೇ ಇಂದಿನ ವೈಶಿಷ್ಟ್ಯ ವಿಶೇಷವಾಗಿ ಉತ್ತರ ಕರ್ನಾಟಕದ ವಿಶಿಷ್ಟ ಹಬ್ಬ ಇಂದಿಗೂ ರೈತಸಮುದಾಯದಲ್ಲಿ 'ಭೂಮಿ ಹುಣ್ಣಿಮೆ' ಎಂದು ಆಚರಿಸಲ್ಪಡುತ್ತದೆ.

ಹೀಗೆ ರೈತರ, ಕೃಷಿ, ಜನಪದ ಸಂಸ್ಕೃತಿಯ ಸಂಕೇತ ಶೀಗೆ ಹುಣ್ಣಿಮೆ.

*



# ವಚನಗಳಲ್ಲಿ ವೈಜ್ಞಾನಿಕ ಅಂಶಗಳು

-ಡಾ|| ವ್ಹಿ.ವ್ಹಿ. ಬಾಗಲಕೋಟಿ,
ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ
ಕಾಲೋನಿ, ಗೋಕಾಕ-೫೯೧೩೦೭.

## ಸೃಷ್ಟಿಯ ರಚನೆ-ವಚನಗಳಲ್ಲಿಯ ಹಾಗೂ ವಿಜ್ಞಾನದಲ್ಲಿಯ ಸಿದ್ಧಾಂತಗಳು

**ಸು**ತ್ತಲಿನ ಸೃಷ್ಟಿಯ ಸ್ವರೂಪ ಹಾಗೂ ಅದರ ರಚನೆಯ ಬಗ್ಗೆ ಬಸವಣ್ಣನವರು ಮಹಾದೇವಿ ಅಕ್ಕನವರೂ, ಶರಣರೂ ಮಾಡಿರುವ ಗಹನವಾದ ಚಿಂತನೆಗಳು, ಅವರವರ ವಚನಗಳಲ್ಲಿ ಕಾಣಸಿಗುತ್ತವೆ. ಮಾನವನು ಶತ ಶತಮಾನಗಳಿಂದ ವಿಶ್ವವನ್ನು ಇಲ್ಲವೆ ಸೃಷ್ಟಿಯನ್ನು ವೀಕ್ಷಿಸುತ್ತಾ ಬಂದಿದ್ದಾನೆ. ಇದರ ರಚನೆಯ ಗುಟ್ಟೇನು? ಕಾಲಾನುಕ್ರಮದಲ್ಲಿ ಇದು ಸ್ವಯಂ ಉದಯವಾಯಿತೇ? ಇಲ್ಲವೆ ಬೇರೊಂದು ಶಕ್ತಿ ಅಥವಾ ಆತ್ಮವು ಇದರ ಉದ್ಭವಕ್ಕೆ ಕಾರಣವಾಯಿತೇನೋ? ಈ ಪ್ರಶ್ನೆಯನ್ನು ವಿಜ್ಞಾನದಲ್ಲಿಯೂ ಅಭ್ಯಸಿಸುತ್ತಾರೆ. ಧರ್ಮವೂ ತನ್ನ ಸಿದ್ಧಾಂತಗಳ ಮುಖಾಂತರ ಉತ್ತರಿಸುತ್ತಾ ಬಂದಿದೆ. ಸೃಷ್ಟಿಯ ರಚನೆಯ ಬಗ್ಗೆ ವಿವಿಧ ಧರ್ಮಗಳಲ್ಲಿ ತಮ್ಮವೇ ಆದ ಸಿದ್ಧಾಂತಗಳಿವೆ. ಆದರೆ ಇಲ್ಲಿಯದು, ವಚನ ಧರ್ಮಕ್ಕೆ ಮಾತ್ರ ಸೀಮಿತ. ಇಲ್ಲಿಯ ವಚನ ಧರ್ಮಗಳ ಸಿದ್ಧಾಂತಗಳಿಗೂ ಮತ್ತು ವಿಜ್ಞಾನದಲ್ಲಿಯ ಸಿದ್ಧಾಂತಗಳಿಗೂ ವ್ಯತ್ಯಾಸಗಳಿವೆಯೋ? ಇಲ್ಲವೆ ಸಾಮ್ಯತೆ ಅಥವಾ ಸಮಾಂತರತೆಗಳಿವೆಯೋ ಎಂಬುದನ್ನು ತಿಳಿದುಕೊಳ್ಳುವುದು ಮುಖ್ಯವಾದದ್ದು.

ಮಹಾದೇವಿ ಅಕ್ಕನವರಾದಿಯಾಗಿ ಶರಣರು ಸೃಷ್ಟಿಯ ರಚನೆಯ ಬಗ್ಗೆ ಖಚಿತ ಹೇಳಿಕೆಗಳನ್ನು ನೀಡಿದ್ದಾರೆ. ಮೊದಲು ಮಹಾದೇವಿಯರ ವಚನವನ್ನು ಗಮನಿಸಿ.

*ತನ್ನ ವಿನೋದಕ್ಕೆ ತಾನೆ ಸೃಜಿಸಿದ ಸಕಲ ಜಗತ್ತು,*
*ತನ್ನ ವಿನೋದಕ್ಕೆ ತಾನೇ ಸುತ್ತಿದನದಕೆ ಸಕಲ ಪ್ರಪಂಚನು,*
*ತನ್ನ ವಿನೋದಕ್ಕೆ ತಾನೆ ತಿರುಗಿಸಿದನಂತ ಭವದುಃಖಗಳಲ್ಲಿ;*
*ಇಂತೆನ್ನ ಚೆನ್ನಮಲ್ಲಿಕಾರ್ಜುನನೆಂಬ ಪರಶಿವನು*
*ತನ್ನ ಜಗದ್ವಿಲಾಸ ಸಾಕಾದಡೆ ಮತ್ತೆ*
*ತಾನೆ ಪರಿವನದರ ಮಾಯಾಪಾಶವನು.*

ಅಕ್ಕನವರ ಅಭಿಪ್ರಾಯದಲ್ಲಿ ಮಹಾಕರ್ತ ಪರಶಿವನು ಸಕಲ ಜಗತ್ತನ್ನೂ ಚೈತನ್ಯ ಹೊಂದಿದ ಜೀವಿಗಳನ್ನೂ, ತನ್ನ ವಿನೋದಕ್ಕೆ ಸೃಷ್ಟಿಸಿದ್ದಾನೆ. ಅದಲ್ಲದೆ ಅವುಗಳಿಗೆ ಪ್ರಪಂಚವನು ಸುತ್ತಿ ಅವುಗಳನ್ನು ದುಃಖದಲ್ಲಿಯೂ ಮುಳುಗಿಸಿದ್ದಾನೆ ಎಂದಾಯಿತು. ಸೃಷ್ಟಿಯ ರಚನೆಯ ಸಂದರ್ಭದಲ್ಲಿ ಅಲ್ಲಮಪ್ರಭುಗಳು, ತಮ್ಮೊಂದು ವಚನದಲ್ಲಿ ಎಲ್ಲಕ್ಕೂ ಮೊದಲು ಏನೂ ಇದ್ದಿಲ್ಲ ಬರಿ ಬಯಲಿತ್ತು. ಬಯಲೇ ಸ್ವರೂಪವಾಗಿ, ಪ್ರಖರವಾಗಿ ಬೆಳಗುತ್ತಿರುವ ಅಖಂಡ ಅಪ್ರತಿಮ ಲಿಂಗದಮೂರ್ತಿ ನೋಡಲು ಅಸಾಧ್ಯ ವಾಗಿ ಹೊಳೆಯುತ್ತಿತ್ತು ಎಂದಿದ್ದಾರೆ. ಇದೇ ವಿಚಾರವನ್ನು ವಿಸ್ತರಿಸಿದ ಶರಣ ತೋಂಟದ ಸಿದ್ಧಲಿಂಗೇಶ್ವರರ ಮುಂದೆ ಬರುವ ವಚನವು, ಆಧುನಿಕ ವಿಜ್ಞಾನವು, ಸೃಷ್ಟಿ ರಚನೆಯ ವಿಷಯದಲ್ಲಿ ಕೊಡುವ ಚಿತ್ರದ ಸಾಮಿಪ್ಯಕ್ಕೆ ನಮ್ಮನ್ನು ಕರೆದೊಯ್ಯುತ್ತಿದೆ.
ಆ ವಚನವಿರುವುದಿಂತು,

ನಿಃಕಲ ಶಿವತತ್ವದಲ್ಲಿ ಜ್ಞಾನ ಚಿತ್ತು ಉದಯವಾಯಿತ್ತು,
ಆ ಚಿತ್ತಿನಿಂದ ಆಕಾರ, ಉಕಾರ, ಮಕಾರ, ಅಕ್ಷರತ್ರಯಗಳುಂಟಾದವು.
ಆ-ಕಾರವೆ, ನಾದ, ಉ-ಕಾರವೆ ಬಿಂದು, ಮ-ಕಾರವೆ ಕಳೆ, ಇಂತೀ
ತ್ರಿವಿಧಕ್ಕೆ ತಾಯಿ ಚಿತ್ತ. ಆ ಓಂಕಾರವೆಂಬ ಪ್ರಣಮವೆ,
ಅಖಂಡ ಪರಿಪೂರ್ಣ ಗೋಳಾಕಾರ ತೇಜೋಮೂರ್ತಿಯಪ್ಪ
ಮಹಾಲಿಂಗ ನೋಡಾ ಮಹಾಲಿಂಗ ಗುರುಸಿದ್ಧೇಶ್ವರ ಪ್ರಭುವೇ

ಅಖಂಡ ಪರಿಪೂರ್ಣ ಗೋಳಾಕಾರದ ತೇಜೋಮೂರ್ತಿಯಂತಿಪ್ಪ ಮಹಾಲಿಂಗ ಎನ್ನುವಲ್ಲಿ, ಆಧುನಿಕ ಖಗೋಲ ವಿಜ್ಞಾನದಲ್ಲಿ ಪ್ರಸ್ತಾಪವಾದ ಘಟನೆಯಾದ ಮಹಾಸ್ಫೋಟದಿಂದ ಹುಟ್ಟಿಕೊಂಡ ವಿಶ್ವದ ಕಲ್ಪನೆ ಕಣ್ಮುಂದೆ ಕಟ್ಟುತ್ತದೆ. ಓಂ-ಕಾರವೆಂಬ ಪ್ರಣಮವು ಅ-ಕಾರವೆಂಬ ನಾದ, ಉ-ಕಾರವೆಂಬ ಬಿಂದು ಮತ್ತು ಮ-ಕಾರವೆಂಬ ಕಳೆಯಿಂದಾಗಿದೆ ಎಂದಿದ್ದಾರೆ ಶರಣರು.

ಮಹಾಸ್ಫೋಟವಾದಾಗ, ಭಯಂಕರ ಶಬ್ದವನ್ನು ಅ-





ಕಾರನಾದವೂ, ಸ್ಫೋಟ-ಪೂರ್ವ, ಅತಿಚಿಕ್ಕ ಗಾತ್ರದ ಅವಕಾಶವಾದ ಬಿಂದುವನ್ನು ಉ-ಕಾರವೂ ಸ್ಫೋಟದಿಂದ ಚಿಮ್ಮಲ್ಪಟ್ಟ ದ್ರವ್ಯ ಶಕ್ತಿಯ ಪರಿಣಾಮ, ಗೋಳಾಕಾರದ, ಲಿಂಗರೂಪಿ ಪ್ರಖರ ಹೊಳಪಿನ ಕಳೆಯನ್ನು ಮ-ಕಾರವೆಂದೂ ಅರ್ಥೈಸಿದರೆ, ವಿಶ್ವದ ನಿರ್ಮಾಣ ಪೂರ್ವದ ಸ್ಫೋಟವನ್ನು ಓಂಕಾರ ಪ್ರಣಮವು ಪ್ರತಿನಿಧಿಸುತ್ತದೆ ಎಂದು ಧಾರಾಳವಾಗಿ ಹೇಳಬಹುದು. ಈಗ ಪ್ರಚಲಿತವಿದ್ದ ಜ್ಯೋತಿರ್ಲಿಂಗವೆಂಬ ಶಬ್ದವು ಹೆಚ್ಚು ಅರ್ಥಪೂರ್ಣವಾಗುತ್ತದೆ.

ಖಗೋಲ ವಿಜ್ಞಾನಿಗಳು, ಪ್ರಸರಣಗೊಳ್ಳುತ್ತಿರುವ ವಿಶ್ವದಿಂದ ಪ್ರಾರಂಭಿಸಿ, ಹಿಂದಕ್ಕೆ ಕಲ್ಪನೆ ಮಾಡಿದಾಗ, ಸಾಕಷ್ಟು ಹಿಂದಿನ ಭೂತಕಾಲದಲ್ಲಿ, ವಿಶ್ವವು ಚಿಕ್ಕಗಾತ್ರದಲ್ಲಿರಬೇಕೆಂದರು ಅದಕ್ಕೆ ಎಂದರೆ ಭಾರತೀಯರು ಬ್ರಹಾಂಡವೆನ್ನುವಂತೆ ಹೆಸರಿಸಿದರು. ಅತೀ ಚಿಕ್ಕ ಗಾತ್ರದಲ್ಲಿ, ಎಲ್ಲ ದ್ರವ್ಯವು ಸಂಕುಚಿಸಲ್ಪಟ್ಟಿರುವಾಗ, ಅಲ್ಲಿರುವುದು ಅತ್ಯಧಿಕ ಸಾಂದ್ರತೆ ಮತ್ತು ಉಷ್ಣತೆ. ಇಂಥ ಅಸ್ಥಿರ ಪರಿಸ್ಥಿತಿಯಿಂದ ಭಯಂಕರ ಶಬ್ಧದೊಂದಿಗೆ ಸ್ಫೋಟವು ಸಂಭವಿಸಿತು. ದ್ರವ್ಯದ ಕಣಗಳು ಮಹಾಶಕ್ತಿಯೊಡನೆ ಸುತ್ತಲೂ ಚಿಮ್ಮಲ್ಪಟ್ಟವು. ಇದಕ್ಕೆ ವಚನಗಳಲ್ಲಿ ಪರಿಪೂರ್ಣ ಗೋಳಾಕಾರದ ತೇಜೋಮೂರ್ತಿಯಂತಿಪ್ಪ ಮಹಾಲಿಂಗವೆಂದು ಕರೆದುದು ಸಮಂಜಸ ಚಿತ್ರವೆನ್ನಬಹುದಲ್ಲವೇ? ಚಿಮ್ಮಲ್ಪಟ್ಟ ಕಣಗಳು ಸಾಂದ್ರ ಗೊಂಡು ಉಷ್ಣತೆ ಕಡಿಮೆಯಾದ ಮೇಲೆ ಈಗಿನ ನಕ್ಷತ್ರಗಳು ನಕ್ಷತ್ರ ಮಂಡಲಗಳೂ, ಸೂರ್ಯವ್ಯೂಹದಂತಹ ಇತರ ಅಸಂಖ್ಯೆ ಗ್ರಹ ಉಪಗ್ರಹಗಳನ್ನೊಳಗೊಂಡ ಕಾಯಗಳು ಉದ್ಭವವಾದವು. ಈಗ ನಾವು ಅದನ್ನೇ ವಿಶ್ವವೆನ್ನುತ್ತೇವೆ.

ಹೀಗಾಗಿ ವಚನಗಳಲ್ಲಿಯ ಓಂಕಾರ ಪ್ರಣವವು ವಿಜ್ಞಾನಿಗಳು ಮಹಾಸ್ಫೋಟ ಎಂದು ಕರೆಯುವುದಕ್ಕೆ ಸಮವಾಯಿತಲ್ಲವೇ? ಬೆಲ್ಜಿಯನ್ ಗಣಿತಜ್ಞ ಅಬೆ ಜಾರ್ಜಿಸ್ ಎಡ್ವರ್ಡ್ ಲೆಮೆಟ್ರೆ ಮತ್ತು ರಶಿಯಾದಲ್ಲಿ ಜನಿಸಿದ ಅಮೆರಿಕನ್ ಜಾರ್ಜ್ ಗ್ಯಾಮೌ ಅವರು ಈ ಹೆಸರನ್ನು ಮೊದಲಿಗೆ ಕೊಟ್ಟವರು.

ಇಷ್ಟಲಿಂಗವು ವಿಶ್ವದ ದೇವನ ಸಂಕೇತವೆಂದು ಹೇಳಿಯಾಗಿದೆ. ಈಗ ಆ ಇಷ್ಟಲಿಂಗವು ವಚನದಲ್ಲಿಯ, ತೇಜೋಮಯ ಜ್ಯೋತಿರ್ಲಿಂಗವನ್ನೂ, ಅಲ್ಲದೆ ಆ ಜ್ಯೋತಿರ್ಲಿಂಗ-ಪೂರ್ವದ ಸ್ಫೋಟವನ್ನು ನೆನಪಿಸುವ ಸಂಕೇತವೆಂದೂ ತಿಳಿಯಬಹುದಲ್ಲವೇ?

ವಿಶ್ವ ರಚನೆಯಾದ ಮೇಲೆ ವಚನಗಳಲಿ ಪಂಚಮಹಾಭೂತಗಳಾದ ಪೃಥ್ವಿ, ಅಪ್ಪು, ಅಗ್ನಿ, ವಾಯು, ಮತ್ತು ಆಕಾಶಗಳ ಉತ್ಪತ್ತಿಯನ್ನು ಹೇಳಿದ್ದು ಹೀಗೆ

*ಸದ್ಯೋಜಾತ ಮುಖದಲ್ಲಿ ಹುಟ್ಟಿತ್ತು ಪೃಥ್ವಿ,*
*ವಾಮದೇವ ಮುಖದಲ್ಲಿ ಹುಟ್ಟಿತ್ತು ಅಪ್ಪು,*
*ಅಘೋರ ಮುಖದಲ್ಲಿ ಹುಟ್ಟಿತ್ತು ವಾಯು,*
*ಈಶಾನ್ಯ ಮುಖದಲ್ಲಿ ಹುಟ್ಟಿತ್ತು ಆಕಾಶ,*
*ಪಂಚಬ್ರಹ್ಮದಿಂದ ಪಂಚ ಮಹಾಭೂತಗಳು ಹುಟ್ಟುದವು.*

ಸೃಷ್ಟಿಯ ರಚನೆಯ ವಿಷಯದಲ್ಲಿ ಹಾಗೂ ನಾವು ವಿಶ್ವದ ಜಗತ್ತಿನ ಮತ್ತೆ ಅಲ್ಲಿಯ ಜೀವರಾಶಿಗಳಲ್ಲಿ ನೋಡುವ ಹುಟ್ಟು, ಸ್ಥಿತಿ, ಲಯಗಳನ್ನು ಸೂಚಿಸುವ ಬಸವಣ್ಣನವರ ವಚನವೊಂದು ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ, ಅದಿರುವುದು ಹೀಗೆ,

*ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ*
*ಅವನ ವಿದ್ಯಾ ಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ*
*ಅವನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು*
*ಅವನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ*
*ಈ ಮೂರು ಪೀಠದಂತಿರಲಿ, ಶರಣನರಿದು*
*ಶರಣೆನುತಿರ್ದೆನು ಕೂಡಲಸಂಗಮದೇವಾ*

ಹಿಂದಿನ ವಚನದಲ್ಲಿ ಹೇಳಿದಂತೆ ಪರಶಿವನು ಜಗತ್ತನ್ನು ಸೃಷ್ಟಿಸಿದನು. ಆ ಪರಬ್ರಹ್ಮನೆ ಇಲ್ಲಿಯ ಶರಣನೆಂದು ತಿಳಿಯಬಹುದು. ಭಾರತೀಯರಲ್ಲಿ ಬ್ರಹ್ಮನು ಸೃಷ್ಟಿಸುವಾತ, ವಿಷ್ಣುವು, ರಕ್ಷಿಸುವಾತ ಮತ್ತು ರುದ್ರನು ನಾಶ(ಲಯ) ಮಾಡುವಾತ ಎಂದು ನಂಬಿಕೆಗಳಿವೆ. ಈ ಶಕ್ತಿಗಳು ಪರಬ್ರಹ್ಮನಿಂದಲೇ ಹುಟ್ಟಿದವುಗಳೆಂದು ವಚನದಲ್ಲಿದೆ ಈ ಮೂರು ಸೃಷ್ಟಿ, ಸ್ಥಿತಿ, ಲಯಗಳು ಪರಬ್ರಹ್ಮನ ಶಕ್ತಿಯ ರೂಪಗಳೆಂದು ವಚನದಲ್ಲಿಯ ಅರ್ಥ. ಈ ಮೂರು ಹಂತಗಳು ಜಗತ್ತಿನಲ್ಲಿಯ ಪ್ರತಿ ವಸ್ತು, ಜೀವಿಯು ದಾಟಲೇಬೇಕಾದ ಮೆಟ್ಟಿಲುಗಳು ಎಂದು ತಿಳಿದಾಗ, ಅಣ್ಣನವರ ಹೇಳಿಕೆ, ನೈಜತೆಗೆ ಎಷ್ಟು ಸಮೀಪವಾಗಿದೆ ಎಂದು ಸ್ಪಷ್ಟವಾಗುತ್ತದೆ.

*

## ನೆನಪು

# ಆರ್ತಜನ ಸಂರಕ್ಷಕ

-ಕೆ.ಜಿ. ರಂಗಯ್ಯ, ನಿವೃತ್ತ ಮುಖ್ಯಶಿಕ್ಷಕರು, ಕೆಂಕೆರೆಪಾಳ್ಯ, ಸುಗ್ಗನಹಳ್ಳಿ ಅಂಚೆ, ಮಾಗಡಿ ತಾ||, ರಾಮನಗರ ಜಿಲ್ಲೆ.

### ಆರ್ತಜನ ಸಂರಕ್ಷಕರು ನಮ್ಮ ಈ ನಡೆದಾಡುವ ದೇವರು

ಶ್ರೀಶ್ರೀಗಳವರು ಮಠದ ಮುಂದಿನ ಪಡಸಾಲೆಯಲ್ಲಿನ ಮಂಚದ ಮೇಲೆ ಕುಳಿತು ದೈಹಿಕ ಹಾಗೂ ಮಾನಸಿಕ ತೊಳಲಾಟಗಳಿಂದ ಭಯವಿಹ್ವಲರಾಗಿ ಬರುವ ಮತ್ತು ಕಾಯಿಲೆ ಕಸಾಲೆಗಳಿಂದ ನೊಂದು ಬರುವ ಅಸಂಖ್ಯ ಭಕ್ತ ಸಮೂಹಕ್ಕೆ ಪ್ರತಿದಿನ, ಅದಕ್ಕಿಂತ ಮಿಗಿಲಾಗಿ ಅಮವಾಸ್ಯೆಯ ದಿನಗಳಂದು ಪರಿಹಾರ ಸೂಚಕವಾಗಿ ಮಂತ್ರಿಸಿದ ದೃಷ್ಟಿ ಎಳೆ ಹಾಗೂ ಯಂತ್ರಗಳನ್ನು ಕಟ್ಟುವುದು ಶ್ರೀಗಳವರ ದಿನಚರಿಯ ಒಂದು ಅವರ್ಣನೀಯ ಭಾಗ. ಮಂಗಳವಾರ ಮತ್ತು ಶುಕ್ರವಾರದಂದು ಗಂಗೆಯ ಪೂಜೆಗೆಂದು ಬರುವ ಹೆಂಗಳೆಯರ ಜಾತ್ರೆಯೇ ನೆರೆಯುತ್ತದೆ. ಸಿದ್ಧಗಂಗೆಯಲ್ಲಿ ಕೆಲವು ದಿನಗಳಲ್ಲಂತೂ ಶ್ರೀ ಶ್ರೀಗಳವರಿಗೆ ಮಧ್ಯಾಹ್ನದ ಪೂಜೆಗೆ ತೆರಳಲು ತುಂಬಾ ವಿಳಂಬವಾಗುವುದಲ್ಲದೆ ಬೆಳಗಿನಿಂದ ಸಂಜೆಯವರೆಗೂ ಬಿಡುವಿಲ್ಲದೆ ಕಾರ್ಯನಿರತರಾಗುವುದನ್ನು ಕಾಣಬಹುದು. ಯಾವುದೇ ಸಮಸ್ಯೆಗಳಿರದ ಭಕ್ತರೂ ಶ್ರೀ ಶ್ರೀಗಳವರಿಗೆ ಅಡ್ಡಬಿದ್ದು ಅವರ ಕೈಗಳಿಂದ ಸಕಲಸಂಕಷ್ಟ ಪರಿಹಾರಕ್ಕೆಂದು ಮುಂಜಾಗ್ರತಾಕ್ರಮವಾಗಿ ಯಂತ್ರಧಾರಣೆ ಮಾಡಿಸಿ ಕೊಂಡು ಮಠದ ಮಹಾಮನೆಯಲ್ಲಿ ಪ್ರಸಾದ ಸ್ವೀಕರಿಸಿ ಹೋಗುತ್ತಾರೆ. ಹಾಗೆ ಹೋದಾಗಲೇ ಅವರಿಗೆ ಮನಸ್ಸು ನಿರಾಳವೆನಿಸುತ್ತದೆ.

ಇನ್ನು ಭೂತ ಚೇಷ್ಟೆಗೊಳಗಾದ ಭ್ರಮಾಧೀನ ಮನಸ್ಸಿನ ಅಧಿಕ ಸಂಖ್ಯೆಯ ಹೆಂಗಸರು ಅದರಲ್ಲೂ ಬಾಣಂತಿಯರು ಮತ್ತು ಕೆಲವೊಮ್ಮೆ ದುರ್ಬಲ ಮನಸ್ಸಿನ ಗಂಡಸರು ತಮಗೆ ಹಿಡಿದುಕೊಂಡಿರುವ ದೆವ್ವಗಳ ಕಾಟದಿಂದ ವಿಮುಕ್ತಿ ಬಯಸಿ ಶ್ರೀ ಶ್ರೀಗಳವರ ಮೊರೆ ಹೋಗುವುದು ಇದ್ದೇ ಇರುತ್ತದೆ. ಕಣ್ಣಾರೆ ಕಂಡ ಇಂತಹ ಒಂದು ಸಂದರ್ಭವನ್ನು ನಾನು ಮರೆಯಲು ಸಾಧ್ಯವಿಲ್ಲದಿರುವುದರ ಕಾರಣವು ಈ ಮುಂದಿನ ಕಥೆಯನ್ನು ಓದಿದ ನಂತರ ನಿಮ್ಮ ಅರಿವಿಗೆ ಬರದಿರಲು ಸಾಧ್ಯವೇ ಇಲ್ಲವೆಂಬುದು ನನ್ನ ಭಾವನೆ.

ಪಾವಗಡದ ಹತ್ತಿರ ಯಾವುದೋ ಒಂದು ಹಳ್ಳಿಯಿಂದ ಬಂದಿದ್ದ ಒಬ್ಬ ಮಧ್ಯವಯಸ್ಕಳಾದ ಅವಿದ್ಯಾವಂತೆಯಾದ, ಮುಗ್ಧ ಹೆಣ್ಣುಮಗಳಿಗೆ ಹಿಡಿದಿದ್ದ ಭೂತ ಬಿಡುಗಡೆಯ ಸಂದರ್ಭವದು. ಸಂಜೆ ಸುಮಾರು 5 ಗಂಟೆಯ ಸಮಯ. ಆಕೆಗೆ ಹಿಡಿದಿದ್ದುದು ಒಂದು ಮುಸ್ಲೀಂ ಜನಾಂಗದ ಹೆಣ್ಣು ದೆವ್ವ. ಹಿಂದಿ ಅಥವಾ ಉರ್ದು ಭಾಷೆಯ ಗಂಧವೇ ಗೊತ್ತಿರದ ಆ ಹಿಂದೂ ಮಹಿಳೆಯ ಬಾಯಿಂದ, ಬಂದಾಗ ಅವಳು ಲೀಲಾಜಾಲವಾಗಿ ಮಾತನಾಡುತ್ತಿದ್ದ ಕನ್ನಡ ಮತ್ತು ತೆಲುಗು ಭಾಷೆಗಳು ಹಠಾತ್ತಾಗಿ ನಿಂತು ಹೋಗಿ ಕೇವಲ ಉರ್ದು ಭಾಷೆಯೇ ವಿಜೃಂಭಿಸಲಾರಂಭಿಸಿತ್ತು. ಶ್ರೀ ಶ್ರೀಗಳವರಿಗೇ ಏಕೆ ಆಕೆಯ ಜೊತೆಯಲ್ಲಿ ಬಂದಿದ್ದ ಬಂಧುಗಳಿಗೂ ಪರಮಾಶ್ಚರ್ಯವಾಯಿತಲ್ಲದೆ ಗೊಂದಲವೂ ಆಯಿತು. ನಾನು ಆ ದಿನಗಳಲ್ಲಿ ಹಿಂದೀ ಶಿಕ್ಷಕರಾಗಿದ್ದ ಶ್ರೀ ಬಿ.ಸಿ. ಗಣೇಶಯ್ಯನವರು ಶಿಕ್ಷಕ ತರಬೇತಿ ಗೆಂದು ನಿಯುಕ್ತರಾಗಿದ್ದುದರಿಂದ ಅದರ ಬದಲಿಗೆ ಪ್ರೌಢ ಶಾಲೆಯಲ್ಲಿ ಹಿಂದಿ ಬೋಧಿಸಲು ಶ್ರೀ ಶ್ರೀಗಳವರಿಂದ ನಿಯೋಜಿತನಾಗಿ ಹೊಸದಾಗಿ ಕೆಲಸಕ್ಕೆ ಸೇರಿದ್ದ ದಿನಗಳವು. ಆದ್ದರಿಂದ ಹಿಂದಿ ಬಲ್ಲವನಾಗಿದ್ದ ನನಗೆ ಶ್ರೀ ಶ್ರೀಗಳವರಿಂದ ಸೇವಕ ರಾಮಣ್ಣನ ಮೂಲಕ ಕರೆ ಬಂದಿತು. ವಿದ್ಯಾರ್ಥಿಗಳ ಜೊತೆ ಸಂಜೆಯ ಶ್ರಮದಾನದಲ್ಲಿ ನಿರತ ನಾಗಿದ್ದ ನಾನು ಬಂದಾಗ ಶ್ರೀ ಶ್ರೀಗಳವರು ಆಕೆಯನ್ನು ಹಿಂದಿಯಲ್ಲಿ ಪ್ರಶ್ನಿಸಿ ಆಕೆಗೆ ಹಿಡಿದಿದ್ದ ದೆವ್ವದ ಹೆಸರು, ಕುಲಗೋತ್ರ ಕಾರಣಗಳನ್ನು ತಿಳಿದು ಒಪ್ಪಿಸುವಂತೆ ಅಪ್ಪಣೆ ಕೊಡಿಸಿದರು. ದೆವ್ವಗಳ ಆಸೆ, ಆಕಾಂಕ್ಷೆ, ಸ್ವರೂಪ, ಗುಣ ಅವತಾರಗಳನ್ನು ನೋಡುವುದಷ್ಟೇ ಅಲ್ಲ ಅದರ ಮಾತ ನಾಡುವ ಸದವಕಾಶವೂ ಸುಯೋಗವೂ ನನಗೆ ಲಭ್ಯವಾಗಿತ್ತು. ಅಲ್ಲಿ ನಡೆದ ಸಂಭಾಷಣೆಯ ವಿವರಗಳು ಇಲ್ಲಿ ಅಪ್ರಸ್ತುತ. ಶ್ರೀ ಶ್ರೀಗಳವರ ಕಟ್ಟುನಿಟ್ಟಾದ ಅಪ್ಪಣೆಗೆ ತಲೆಬಾಗಿದ ಆ ದೆವ್ವ (ಅದಕ್ಕೆ ಕನ್ನಡ ಅರ್ಥವಾಗುತ್ತಿತ್ತೆಂದು ಕಾಣುತ್ತದೆ) 'ಇನ್ನೆಂದೂ ಮತ್ತೆ ಬರುವುದಿಲ್ಲ'ವೆಂದು ಮಾತುಕೊಟ್ಟು ಕಂಬಿ ಕಿತ್ತ ಮೇಲೆ ಆ ಹೆಂಗಳೆಯರು ತುಂಬಾ ಬಳಲಿದವರಂತೆ ಕಂಡಳಲ್ಲದೆ ಪುನಃ ಕನ್ನಡದಲ್ಲಿ ನಿರರ್ಗಳವಾಗಿ ಮಾತನಾಡಲಾರಂಭಿಸಿದಳು.

ದಿಙ್ಮೂಢನಾದ ನಾನು ಕುತೂಹಲ ತಡೆಯದೆ ಮತ್ತೆ ಆಕೆಯನ್ನು ಹಿಂದೀ ಭಾಷೆಯಲ್ಲಿ ಮಾತನಾಡಿಸಿದಾಗ ಆಕೆ ತನಗೆ ಏನೂ ಆಗಿಲ್ಲವೇನೋ ಎಂಬಂತೆ ಮಿಕಮಿಕನೆ ಸುತ್ತ ನೆರೆದಿದ್ದವರನ್ನು ನಮ್ಮೆಲ್ಲರೂ ದಂಗಾಗಿಸಿತ್ತು, ದೆವ್ವಗಳ ಬಗ್ಗೆ ಅಷ್ಟಾಗಿ ನಂಬಿಕೆಯಿಲ್ಲದ ವಿಜ್ಞಾನ ಶಿಕ್ಷಕನಾದ ನನಗೆ ಆ ಹೆಣ್ಣು ದೆವ್ವ ಭಾಷೆಯೇ ಗೊತ್ತಿರದ ಮುಗ್ಧೆಯ ಬಾಯಲ್ಲಿ ಉರ್ದು ಮಾತನಾಡಿಸಿದ್ದು ಇಂದಿಗೂ ಮಿಲಿಯನ್ ಡಾಲರ್ ಪ್ರಶ್ನೆಯಾಗಿಯೇ ಉಳಿದಿದೆ!.

*



## ವಿಚಾರ

# ದಾಸೋಹಂ, ಭಾವ-ಸ್ವಭಾವ

-ತದ್ದಲಸೆ ವಿಘ್ನೇಶ್ವರ ಶರ್ಮ, ಅಂಚೆ ಹುಣ್ಣೇಕೊಪ್ಪ, ಶಿರಸಿ, ಉತ್ತರ ಕನ್ನಡ ಜಿಲ್ಲೆ.

ನಾವು ಭಗವಂತನ ದಾಸರಾದರೆ ಆತ ನಮ್ಮಲ್ಲಿ ವಾಸವಾಗಿರುತ್ತಾನೆ. ಈ ಸೃಷ್ಟಿಯ ಮೂಲ ಚೈತನ್ಯ ಭಗವಂತ. ಆತನಿಂದಲೇ ಎಲ್ಲವೂ ನಡೆಯುತ್ತಿರುವುದು. ಹಾಗಾಗಿ 'ತೇನ ವಿನಾ ತೃಣಮಪಿ ನ ಚಲತಿ ಎಂದದ್ದು. ಆತ ಸರ್ವಾಂತರ್ಯಾಮಿ. ಎಲ್ಲವನ್ನು ನೋಡುತ್ತಿರುತ್ತಾನೆ. ತಿಳಿಯುತ್ತಿರುತ್ತಾನೆ. ಸರ್ವಭೂತಾಂತರಾತ್ಮ ಆಗಿದ್ದಾನೆ. ನಮ್ಮಲ್ಲು ಸಹ.

'ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಅರ್ಜುನ ತಿಷ್ಠತಿ' ಎಂದಿದ್ದಾನೆ. ಅಂಥವನಿಗೆ ಶರಣು ಹೊಂದಿದಾಗ ಅವರನ್ನು ಸದಾ ರಕ್ಷಿಸಬಲ್ಲ.

ಈ ಕಾರಣಕ್ಕಾಗಿಯೇ ಆಂಜನೇಯ 'ದಾಸೋಹಂ ಕೋಸಲೇಂದ್ರಸ್ಯ ಅಂದದ್ದು. ಆಂಜನೇಯನ ಶಕ್ತಿ-ಸಾಮರ್ಥ್ಯ ಸಂಧನೇನೂ ಆಗಿರಲಿಲ್ಲ. ಬಲಾಡ್ಯ ವಜ್ರದೇಹಿ, ಸಮುದ್ರ ಉಲ್ಲಂಘಿಸಿದ ವ್ಯಕ್ತಿ, ಶಕ್ತಿ, ದುಷ್ಟರಿಗೆ ಭೀತಿ ಹುಟ್ಟಿಸಲು ಲಂಕೆಯನ್ನೇ ಸುಟ್ಟ, ರಾವಣನಿಗೂ ಸೀತಾಪಹರಣ ಮಾಡಿದ ಪಾಪಕ್ಕಾಗಿ ನೀತಿ ಬೋಧಿಸಿದ, ಆದರೂ ಪ್ರಯೋಜನವಾಗಲಿಲ್ಲ. ಆಂಜನೇಯ ಜ್ಞಾನಿ. ಎಲ್ಲವನ್ನೂ ತಿಳಿದವ. ಇಂಥ ಮಹಾನ್ ವ್ಯಕ್ತಿ ತನ್ನನ್ನು ತಿಳಿದದ್ದು ಶ್ರೀ ರಾಮಚಂದ್ರನಿಗೆದಾಸನೆಂದು. ಹಿರಿಯರಿಗೆ, ಪೂಜ್ಯರಿಗೆ ಗೌರವ ನೀಡಿದರೆ ನಮ್ಮದೇನೂ ಅಲ್ಲಿ ನಷ್ಟವಾಗುವುದಿಲ್ಲ. ಸ್ವಾಭಿಮಾನ ಅಳಿಯುವುದಿಲ್ಲ. ಅದಕ್ಕೆ ಇನ್ನಷ್ಟು ಬಲ-ನೆಲ ಒದಗುತ್ತದೆ. ಕುರುಕ್ಷೇತ್ರದಲ್ಲೂ ಸಹ ಇನ್ನೇನು ಯುದ್ಧ ಆರಂಭವಾಗುತ್ತದೆ ಎನ್ನುವಾಗ ಧರ್ಮರಾಜ ಶತ್ರುಪಾಳಿಯದಲ್ಲಿದ್ದ ಭೀಷ್ಮ-ದ್ರೋಣ, ಕೃಪಾಚಾರ್ಯರಿಗೆ ನಮಸ್ಕರಿಸಿ ಆಶೀರ್ವಾದ ಬೇಡಿದ, ಅದಕ್ಕೂ ಮೊದಲು ಆತ ಗಾಂಧಾರಿಯಲ್ಲೂ ಯುದ್ಧ ನಿಶ್ಚಯವಾದಾಗ ನಮಸ್ಕರಿಸಿ ಆಶೀರ್ವಾದ ಕೇಳಿದ್ದ. ಆಗ ಗಾಂಧಾರಿಗೆ ಏನು ಹೇಳಬೇಕೆಂದು ತೋಚಲಿಲ್ಲ. ನಿನಗೆ ಜಯವಾಗಲಿ ಅಂದರೆ ತನ್ನ ಮಕ್ಕಳಾದ ಕೌರವರು ಸೋಲುತ್ತಾರೆ, ಧರ್ಮಸಂಕಟ. ಹಾಗಾಗಿ ಅವಳು ಆಲೋಚಿಸಿ 'ಯತೋ ಧರ್ಮಃ ತ ತೋ ಜಯಃ' ಅಂದಳು. ಎಲ್ಲಿ ಧರ್ಮವಿರುತ್ತದೋ ಅಲ್ಲಿ ಜಯ ಸಿದ್ಧ. ಇಲ್ಲಿ ನಮ್ಮ ಧರ್ಮವೂ ಹಾಗೆ ಇರಬೇಕು.

ನಾನು ಭಗವಂತನ ಭಕ್ತ, ದಾಸನೆಂದು ಕೇವಲ ಹೇಳಿಕೊಂಡರೆ ಸಾಲದು, ಅಲ್ಲಿ ಆತನ ಭಾವನೆ-ಕರ್ತವ್ಯ-ಕರ್ಮನಿಷ್ಠೆಗಳನ್ನೆಲ್ಲ ಆತ ಪರೀಕ್ಷಿಸುತ್ತಾನೆ. ಪ್ರತಿಯೊಬ್ಬನಿಗೂ ಅವನಿಗೆ ಸಂಬಂಧಿಸಿದ ಕೆಲವು ಕರ್ತವ್ಯಗಳೇ ಇರುತ್ತವೆ. ಅದನ್ನೆಲ್ಲ ಸರಿಯಾಗಿ ನಿರ್ವಹಿಸಿ ಅನನ್ಯ ಶರಣು ಆದರೆ ನಮ್ಮನ್ನು ಆತನಿಗೇ ಅರ್ಪಿಸಿಕೊಂಡರೆ ಆತ ಸುಪ್ರೀತನಾಗುತ್ತಾನೆ. ತನ್ನ ಭಕ್ತನ ಮೇಲೆ ಕರುಣೆ ಇರಿಸುತ್ತಾನೆ. 'ಯೋಗಕ್ಷೇಮಂ ವಹಾಮ್ಯಹಂ' ಅನ್ನುತ್ತಾನೆ. ಹಾಗಾಗಿಯೇ ಆತ 'ನಿಯತಂ ಕುರುಕರ್ಮತ್ವಂ ಅಂದಿದ್ದಾನೆ, ಕೆಲವರು ದಾಸೋಹ ಪಂಥದಿಂದ ಸೋಮಾರಿಗಳಾಗಲು ನೋಡುತ್ತಾರೆ. ಮಠ-ಮಾನ್ಯಗಳಲ್ಲಿ ಸೇರಿ ತಾವು ಮಾಡಲೇ ಬೇಕಾದ ಕರ್ಮನಿಷ್ಠೆ-ಧರ್ಮ-ನಿಯಮ ಬಿಟ್ಟು ಸುಮ್ಮನೇ ಸಾಧು ಸಂತರಂತೆ ವರ್ತಿಸುವುದುಂಟು. ಸರಿಯಾಗಿ ಇದ್ದವರು ಸಾಧ್ಯವಿದ್ದ ಕಾರ್ಯ ಮಾಡದಿದ್ದರೆ ಭಗವಂತ ಕ್ಷಮಿಸಲಾರ. ಇನ್ನೊಬ್ಬರ ದುಡಿಮೆಯ ಸ್ವತ್ತನ್ನು ನಾವು ನಿರಾಯಾಸವಾಗಿ ಪಡೆದು ತಿನ್ನುವುದು ಸರಿಯಾಗದು. ಅದು ಸಮಾಜಕ್ಕೆ ಶೋಷಣೆ ಮಾಡಿದ ಹಾಗೆ ! ಯಾರು ಶ್ರಮ ಪಡೆದು ತಿನ್ನುತ್ತಾರೆಯೋ ಅವರನ್ನು ದೇವತೆಗಳೂ ಸಹ ಮನ್ನಿಸುವುದಿಲ್ಲವೆಂದು ನಹಿ ಶ್ರಾಂತಸ್ಯ ಸಖ್ಯಾಯ ದೇವಾಃ ಎಂದು ವೈದಿಕ ಮಂತ್ರ ತಿಳಿಸುತ್ತದೆ.

ಒಂದು ಮಠದಲ್ಲಿ ಒಮ್ಮೆ ಪ್ರವಚನಕ್ಕಾಗಿ ಹೋಗಿದ್ದೆ. ಅದು ಸಂಜೆ ಐದು ಘಂಟೆಯಿಂದ ಆರು ಘಂಟೆಯವರೆಗಿತ್ತು. ಅಲ್ಲಿಯ ಕೆಲಸಗಾರರೂ ಬಂದು ಕುಳಿತಿದ್ದರು. ಪ್ರವಚನ ಮುಗಿದು ಪ್ರಸಾದ ಸ್ವೀಕರಿಸಿದ ಮೇಲೆ ಅಲ್ಲಿಯ ಸ್ವಾಮಿಗಳು ಕೆಲಸಗಾರರನ್ನುದ್ದೇಶಿಸಿ- 'ನೀವಿಂದು ಜ್ಞಾನ ದಾಸೋಹದಲ್ಲಿ ಒಂದು ತಾಸು ಭಗವಂತನ ಚರಿತ್ರೆ ಕೇಳಿದ್ದೀರಿ. ಇದು ಮಾನಸಿಕ ಆಹಾರ, ಹಾಗೇ ಶಾರೀರಿಕ ಆಹಾರಕ್ಕೂ ಬೇಕಾದ ಕಾಯಕವೂ ಇರಬೇಕು, ಆಗ ನಿಮ್ಮ ಕರ್ತವ್ಯ ಪಾಲನೆಯಾದಂತಾಗುತ್ತದೆ' ಅಂದರು. ಇದನ್ನು ಕೇಳಿದ ನೂರಾರು ಜನರು ತಮ್ಮ ಕೆಲಸ ಕಾರ್ಯಗಳಲ್ಲಿ ತೊಡಗಿಕೊಂಡರು.

ಈ ದಾಸೋಹ ಭಾವವೇ ಭಕ್ತಿ ಪಂಥದ ಮೂಲ ದ್ರವ್ಯ. ಇದನ್ನು ಆಶ್ರಯಿಸಿಯೇ ಅನೇಕರು ಮುಕ್ತಿ ಕಂಡರು. ಹಾಗಾಗಿ ಈ ಭಾವ ಭಕ್ತಿಗಳಲ್ಲಿ ಅನ್ಯೋನ್ಯ ಆಶ್ರಿತ ಸಂಬಂಧ. ಅನೇಕ ದಾಸವರೇಣ್ಯದಿಂದ ಈ ಪಂಥ ವಿಕಾಸವಾಗುವಂತಾಯಿತು. ಶ್ರೀ ಪುರಂದರದಾಸರು ಕನಕ-ಕಬೀರ ಮುಂತಾದವರು ಭಜನೆ-ಹಾಡುಗಳಿಂದ ಭವತ್ಸಾಕ್ಷಾತ್ಕಾರ ಪಡೆದರು.

ಆಚಾರ ವಿಚಾರ–ವಚನಗಳಿಂದ ಶ್ರೀ ಬಸವಣ್ಣ–ಅಕ್ಕಮಹಾದೇವಿ ಹೀಗೆ ಹಲವರು ಭಗವಂತನೊಂದಿಗೇ ಬೆರೆತು ಸಮಾಜಕ್ಕೂ ಬೆಳಕು ನೀಡಿ ಇತಿಹಾಸಕ್ಕೆ ಮೆರಗು ತಂದವರು. ಅವರ ತತ್ವಬೋಧೆಯಲ್ಲೆಲ್ಲ–'ನಿಮ್ಮ ನಿಮ್ಮ ಕಾಯಕ ಮಾಡಿ ಆ ಸರ್ವೇಶ್ವರನಿಗೇ ಶರಣು ಹೊಂದಿ' ಎನ್ನುವುದು. ಕಾಯಕವೇ ಕೈಲಾಸವೆನ್ನುವಾಗ ಸೋಮಾರಿತನಕ್ಕೆ ಆಸ್ಪದವೇ ಇಲ್ಲದಂತಾಗಿ ಜಾತಿ–ಮತ–ಪಂಥಗಳೂ ಸುಳಿಯದಂತಾಗಿದೆ.

ಈ ದಾಸೋಹಂಭಾವವೇ ನಮಗೊಂದು ಸಂಪತ್ತು ಇದ್ದ ಹಾಗೆ, ಅದೇ ರಕ್ಷಕ, ಪೋಷಕ, ಪ್ರೇರಕವೂ ಹೌದು. ಜಂಭ ದುರಭಿಮಾನಗಳ ವಿಕಾರಗಳನ್ನೆಲ್ಲ ಅದು ದೂರ ತಳ್ಳುತ್ತದೆ. ನಾನೇ ಎಲ್ಲವನ್ನೂ ಮಾಡಿದ್ದೇನ್ನುವ ಅಹಂ ಆಳಿಸುತ್ತದೆ. ಏನಾದರೂ ಒಳಿತಿನ ಕಾರ್ಯಗಳಾದರೆ ನಾನು ನಿಮಿತ್ತ ಮಾತ್ರ. ಭಗವಂತನೇ ಮಾಡಿಸಿದ್ದು. ಆ ಶ್ರೇಯಸ್ಸನ್ನು ಅವನಿಗೇ ಅರ್ಪಿಸಿ ಬಿಟ್ಟರೆ ಆತನೂ ಸುಪ್ರೀತನಾಗುವನು. ನಾವು ಮಾಡುವ ಎಲ್ಲ ಕರ್ಮಗಳೂ 'ಶಂಭೋತನಾರಾಧನಂ' ಆಗಬೇಕು. ಅದೇ ಸರ್ವಾರ್ಪಣಭಾವ.

'ಪ್ರಾತಃ ಪ್ರಭೃತಿ ಸಾಯಾತಂ, ಸಾಯಾದಿ ಪ್ರಾತರಂತಥಾ
ಯತ್ ಕರೋಮಿ ಜಗನ್ನಾಥ, ತದೈವ ತವಪೂಜನಂ'

ಈ ಸ್ವಭಾವ ಸ್ವಕರ್ತವ್ಯ ನಮ್ಮದಾದರೆ ಎಲ್ಲವನ್ನು ಆತನೇ ವಹಿಸಿಕೊಳ್ಳುತ್ತಾನೆ. ನಮ್ಮಲ್ಲಿ ಉಂಟಾಗುವ ಸರ್ವಾರ್ಪಣ. ಸುಪ್ರಸನ್ನ, ಶರಣಾತಿ, ಆರ್ತಭಾವಗಳನ್ನು ಅರ್ಥೈಸಿ ಕೊಂಡು ಅದಕ್ಕೆ ಪರಿಹಾರ ನೀಡುತ್ತಾನೆ.

ನಾವು ಸಂಭಾವರಿರುವಾಗ ತಂದೆ–ತಾಯಿಗಳು ಎಲ್ಲವನ್ನು ನೋಡುತ್ತಿರುತ್ತಾರೆ. ಕಾಲಕಾಲಕ್ಕೆ ನಮಗೇನು ಬೇಕೆಂದು ಅವರೇ ತಿಳಿದುಕೊಳ್ಳುತ್ತಾರೆ. ವ್ಯವಸ್ಥೆ ಮಾಡುತ್ತಾರೆ. ಹಾಗೆ ಭಗವಂತನಿಗೇ ನಾವು ನಮ್ಮನ್ನು ಒಪ್ಪಿಸಿಕೊಂಡರೆ ಅವನೇ ಎಲ್ಲವನ್ನು ನೋಡಿಕೊಳ್ಳದೇ ಇರುತ್ತಾನೆಯೇ ನಮ್ಮ ನ್ಯಾಯದಲ್ಲಿ ಕಿಶೋರ ಮರ್ಕಟ, ಮಾರ್ಜಾರ ಕಿಶೋರ, ಹೀಗೆ ಎರಡು ಸಂಗತಿಗಳಿವೆ. ಅಂದರೆ ಕಿಶೋರ ಮರ್ಕಟದಲ್ಲಿ ಸಣ್ಣ ಮಗು ತಾಯಿಯನ್ನು ಅಪ್ಪು ಹಾಕಿ ಹಿಡಿದು ಬೇರೆಡೆ ಸಂಚರಿಸುತ್ತದೆ. ಮಾರ್ಜಾರ ಕಿಶೋರ ಹಾಗಲ್ಲ! ತಾಯಿ ಬೆಕ್ಕು ತನ್ನ ಮರಿಯನ್ನು ಬಾಯಿಯಲ್ಲಿ ಕಚ್ಚಿ ಹಿಡಿದು ಬೇರೆ ಬೇರೆ ಕಡೆ ಸ್ಥಳಾಂತರಿಸುತ್ತದೆ. ಇದರಲ್ಲೂ ಮಾರ್ಜಾರ ಕಿಶೋರ ಸುರಕ್ಷಿತ. ತಾಯಿ ಬೆಕ್ಕಿನದೇ ಜವಾಬ್ದಾರಿ. ನಾವೂ ಸಹ ನಮ್ಮ ಭವಿಷ್ಯ ಬೆಳವಣಿಗೆಯ ಹೊಣೆಯನ್ನೆಲ್ಲಾ ಭವವಂತನಿಗೇ ಒಪ್ಪಿಸಿ ಬಿಟ್ಟರೆ ನಮಗೆ ನಿಃಶ್ಚಿಂತೆ, ನಿರ್ಭಯತ್ವ, ಏನಾದರೂ ಗಂಡಾಂತರ ಬಂದಾಗಲೂ ಆತನನ್ನೇ ಸ್ಮರಿಸಿದರೆ ಅವನೇನೂ ಸುಮ್ಮನೇ ಇರುವುದಿಲ್ಲ, ಧಾವಿಸಿ ಬಂದು ರಕ್ಷಣೆ ನೀಡಬಲ್ಲ.

'ಯೇ ಯಥಾಮಾಂ ಪ್ರಪದ್ಯಂತೆ, ತಾಂ
ತಥೈವಭಜಾಮ್ಯಹಂ ಎಂದು ಆತನೇ ಹೇಳಿದ್ದು.

ಭಕ್ತಪ್ರಹ್ಲಾದ ಭಗವಂತನ ಪರಮಭಕ್ತ, ಎಲ್ಲ ಕಡೆಯಲ್ಲೂ ಆತನಿಗೆ ಭಗವದ್ದರ್ಶನ. ತಂದೆ ಹಿರಣ್ಯಕಶಿಪು ದೇವರನ್ನು ನಂಬುತ್ತಿರಲಿಲ್ಲ. ಇದರಿಂದ ತಂದೆ ಮಗನಲ್ಲಿ ವಿರಸ–ದ್ವೇಷ. ಒಂದು ಸಾರಿ 'ನಿನ್ನ ಭಗವಂತ ಎಲ್ಲ ಕಡೆಯೂ ಇರುತ್ತಿದ್ದರೆ ಈ ಕಂಭದಲ್ಲಿ ತೋರಿಸು' ಎಂದ. ಪ್ರಹ್ಲಾದ ಪ್ರಾರ್ಥಿಸಿದ. ಕಂಬದಿಂದಲೇ ನರಸಿಂಹನ ಅವತಾರವಾಯಿತು. ಭಕ್ತನ ಭಕ್ತಿ ಭಯ ಅಳಿಸಿ ಗೆಲುವು ತಂದಿತು.

ಅಂಬರೀಷನೆಂಬುವವನೂ ದೇವರಭಕ್ತ, ಶ್ರದ್ಧೆಯಿಂದ ಏಕಾದಶಿ ವ್ರತ ಮಾಡುತ್ತಿದ್ದ. ಆ ದಿನ ಉಪವಾಸ, ದ್ವಾದಶಿಯಂದು ಪಾರಣೆಯಾಗಬೇಕಾಗಿತ್ತು. ಒಮ್ಮೆ ಪಾರಣೆಯ ಸಂದರ್ಭದಲ್ಲಿ ಮಹರ್ಷಿ ದೂರ್ವಾಸರು ಬಂದರು. ಆತಿಥ್ಯ ನೀಡಲು ಮುಂದಾದ. ಅವರು ನದಿಗೆ ಹೋಗಿ ಸ್ನಾನ ಮುಗಿಸಿ ಬರುತ್ತೇನೆಂದು ನಡೆದರು. ದ್ವಾದಶಿ ಮುಕ್ತಾಯಗೊಳ್ಳುವ ಸಮಯ ಸಮೀಪಿಸುತ್ತಿತ್ತು. ಮಹರ್ಷಿಗಳು ಬರಲಿಲ್ಲ. ಆಗ ವ್ರತಲೋಪವಾಗಬಾರದೆಂದು ಕೇವಲ ತೀರ್ಥ ಪ್ರಾಶನ ಮಾಡಿ ನಿರೀಕ್ಷಿಸುತ್ತ ಕುಳಿತ. ಅವರೂ ಬಂದರು. ಅತಿಥಿಗಳನ್ನು ಅನಾದರ ಮಾಡಿ ತೀರ್ಥ ಪ್ರಾಶನ ಮಾಡಿದ್ದಕ್ಕಾಗಿ ಸಿಟ್ಟಿನಿಂದ 'ನೀನು ನಾನಾ ಯೋನಿಗಳಲ್ಲಿ ಜನಿಸುವಂತವನಾಗು' ಎಂದು ಶಾಪವಿತ್ತರು. ಅದಕ್ಕೆ ಹೆದರಿ ಅಂಬರೀಷ ಆರ್ತಭಾವದಿಂದ ಭಗವಂತನನ್ನು ಪ್ರಾರ್ಥಿಸಿದ. ಆಗ ಭಗವಂತ ರಕ್ಷಣೆಗೆ ಧಾವಿಸಿ ಅಂಬರೀಶನಿಗೆ ಅಭಯ ನೀಡಿ ಋಷಿ ಶಾಪವನ್ನು ತಾನೇ ಸ್ವೀಕರಿಸಿ ದಶಾವತಾರ ತಾಳಿದ.

ಭಗವಂತನನ್ನು ಉಪಾಸನೆ ಮಾಡುವಾಗ 'ಸೋಹಂ ಭಾವೇನ ಸೂಜಯೇತ್', ಅಂದಿದ್ದಾರೆ. ಇದರ ಅರ್ಥ ಬಾಹ್ಯ ಪರಿಕಲ್ಪನೆಯನ್ನೆಲ್ಲ ಬಿಟ್ಟು ಶುದ್ಧ–ಬುದ್ಧನಾಗಿ ಆರಾಧಿಸು ಎಂಬುದು. ದೇವಾಲಯಗಳಲ್ಲಿ ದೇವರ ವಿಗ್ರಹ ಇರಿಸುವಾಗ ಅಲ್ಲಿಯ ಪಾವಿತ್ರ್ಯತೆಯನ್ನು ನಿರೀಕ್ಷಿಸಿ ಪರೀಕ್ಷಿಸಿ ಸ್ಥಾಪಿಸುತ್ತೇವೆ. ಹಾಗೇ ದೇವಾಲಯದಲ್ಲಿರುವ ಭಗವಂತನ ವಾಸಕ್ಕೆ ದಾಸರೆನ್ನಿಸಿದ ನಾವೂ ಇದನ್ನು ತಿಳಿದು ಕೊಳ್ಳಬೇಕು, ಮಾನಸಿಕ ಶುಚಿತ್ವ ಕ್ರಿಯಾ ಸಿದ್ಧಿತ್ವಗಳಿಂದ ಆತನನ್ನು ಪ್ರಸನ್ನಗೊಳಿಸಿಕೊಂಡರೆ ದಾಸೋಹಂಭಾವ ಅರ್ಥವತ್ತಾಗುತ್ತದೆ. ನಮ್ಮನ್ನೇ ನಾವು ಸಮರ್ಪಿಸಿಕೊಂಡಂತಾಗುತ್ತದೆ. ಆಗ ನಮ್ಮ ಎಲ್ಲ ವ್ಯವಹಾರದಲ್ಲೂ ಆತನ ಕರಾವಲಂಬನ ದೊರೆಯುವಂತಾಗುತ್ತದೆ.

*





## ಉಪನ್ಯಾಸದ ಹಿರಿಮೆ

–ವಿದ್ಯಾವಾಚಸ್ಪತಿ ಕವಿತಾಕೃಷ್ಣ, ಕ್ಯಾತ್ಸಂದ್ರ, ತುಮಕೂರು–೫೭೨ ೧೦೪.

'ನಾವು ನಮ್ಮ ಮಕ್ಕಳನ್ನು ನಿತ್ಯವೂ ಶಾಲೆಗೆ ಕಳುಹಿಸುತ್ತಿದ್ದೇವೆ. ಯಾರಾದರೂ ಏಕೆ ಶಾಲೆಗೆ ಕಳುಹಿಸುತ್ತಿದ್ದೀರಿ? ಎಂದು ಪ್ರಶ್ನಿಸಿದರೆ ಓದು–ಬರಹ ಕಲಿಯೋಕೆ ಎಂದು ಉತ್ತರಿಸುತ್ತೇವೆ. ಇದು ಸ್ಥೂಲವಾದ ಉತ್ತರ. ಒಂದು ರೀತಿಯಲ್ಲಿ ಸರಿ. ಅವರು ಮುಂದುವರೆದು ಓದಲು ಪುಸ್ತಕವಿದೆ. ಬರೆಯಲು ಸ್ಲೇಟು, ಬಳಪ ಅಥವಾ ಲೇಖನಿ ಹಾಳೆಯಿದೆ. ಮನೆಯಲ್ಲೇ ಓದು–ಬರಹ ಕಲಿಯಬಹುದಲ್ಲಾ? ಮತ್ತೆ ಶಾಲೆಗೆ ಕಳುಹಿಸುವುದೇಕೆ? ಎಂದು ಪ್ರಶ್ನಿಸಿದರೆ ನಮ್ಮಲ್ಲಿ ಆ ಪ್ರಶ್ನೆಗೆ ಸರಿಯಾದ ಉತ್ತರವಿಲ್ಲ. ಕೇವಲ ಪುಸ್ತಕ, ಸ್ಲೇಟು ಬಳಪ ಇದ್ದಾಕ್ಷಣಕ್ಕೆ ಓದು–ಬರಹ ಲಭಿಸುವುದಿಲ್ಲ. ವಿದ್ಯೆ ಲಭಿಸುವುದು ಗುರುವಿನಿಂದ ಗುರು ಇರುವುದು ಮನೆಯಲ್ಲಿ ಅಲ್ಲ; ಶಾಲೆಯಲ್ಲಿ. ಗುರು ಶಾಲೆಯಲ್ಲಿ ಉಪನ್ಯಾಸ ನೀಡುತ್ತಾನೆ. ಮಾರ್ಗದರ್ಶನ ಮಾಡುತ್ತಾನೆ. ನಮ್ಮಲ್ಲಿ ಸುಪ್ತವಾಗಿರುವ ಭಾವನೆಗಳನ್ನು ಅರಳಿಸುತ್ತಾನೆ, ಅರಳಿಸಲು ಪ್ರಚೋದಿಸುತ್ತಾನೆ. ಜ್ಞಾನದ ದೀಪ ಹಚ್ಚುತ್ತಾನೆ. ಒಳಿತು–ಕೆಡಕು, ಬೇಕು–ಬೇಡಗಳ ಬಗ್ಗೆ ವಿವೇಚನೆ ಮೂಡಿಸುತ್ತಾನೆ. 'ಗು' ಎಂದರೆ ಕತ್ತಲನ್ನು, 'ರು' ಎಂದರೆ ಹೋಗಲಾಡಿಸುವವನು ಎಂದರ್ಥ. ಈ ಕೆಲಸವನ್ನು ಪುಸ್ತಕ, ಸ್ಲೇಟು, ಬಳಪ ಮಾಡವುದಿಲ್ಲ. ಅದಕ್ಕಾಗಿಯೇ ಗುರು ಇರುವುದರಿಂದ ನಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವೆವು.

ಓದುವುದು ಉತ್ತಮ ಲಕ್ಷಣವೇನೋ ಅಹುದು. ಆದರೆ ಓದುವುದಕ್ಕಿಂತ ಅನುಭವಸ್ಥರಿಂದ ಕೇಳಿ ತಿಳಿಯುವ ವಿಧಾನ ಅತ್ಯಂತ ಶ್ರೇಷ್ಠವಾದುದು. ಈ ವಿಧಾನ, ಸರಳ, ಸುಂದರ ಮಾತ್ರವಲ್ಲ ಅತ್ಯಂತ ಪ್ರಯೋಜನಕಾರಿಯಾದುದು. ಉಪನಿಷತ್ತುಗಳು ಕೇಳಿ ತಿಳಿಯುವ ಉಪನ್ಯಾಸ ಪದ್ಧತಿಗೆ ಮಹತ್ವ ನೀಡಿದವು. ಗುರುವಿನ ಗುಲಾಮನಾಗುವ ತನಕ ದೊರಕದಣ್ಣ ಮುಕುತಿ ಎಂದು ಸಾರಿದವು. ಗುರುವಿನ ಅನುಗ್ರಹಕ್ಕಾಗಿ ಪ್ರಾಚೀನ ಕಾಲದಿಂದಲೂ ತವಕಿಸುತ್ತಲೇ ಬಂದಿದ್ದಾರೆ. ಗುರುವಿನ ಅತ್ಯಂತ ಸಮೀಪ ಹೋಗಿ ಕೂರುತ್ತಲೇ ಇದ್ದಾರೆ. ಅವನ ಉಪನ್ಯಾಸ ಕೇಳುತ್ತಲೇ ಇದ್ದಾರೆ. ಆದರೆ ದೊರಕಬೇಕಾದ ಫಲ ಮಾತ್ರ ಲಭಿಸಿಲ್ಲ. ಕಾರಣ ಗುರುವಿನ ಸನಿಹ ದೇಹ ಕುಳಿತರಾಯಿತೆ? ಮನವನ್ನು ಮಡಿ ಮಾಡಿ, ಪ್ರಾಥಮಿಕ ಅಣೆ ಮಾಡಿ, ಗುರುವಿಗೆ ಮನವನ್ನು ಅಡವಿಡುವುದರ ಸೋತಿದ್ದೇವೆ. ಅಶ್ರದ್ಧೆಯಿಂದ ಕೂಡಿದ್ದೇವೆ. ನೆನೆದ ಬೆಂಕಿಕಡ್ಡಿ ಗೀರಿದರೆ ಹತ್ತಿಕೊಳ್ಳುವುದೆ? ಹೀಗಾಗಿ ಉಪನ್ಯಾಸದ ಫಲವು ಲಭಿಸದೆ ಹೋಗಿದೆ. ನಾವು ಶಾಲೆಗೆ ಹೋಗುವ ಮಗುವಿನಂತೆ ಸಜ್ಜಾಗಿ ಹೋಗಬೇಕಾದುದು ಅನಿವಾರ್ಯವಾಗಿದೆ.

ಉಪನ್ಯಾಸದ ಫಲ ಲಭಿಸಲು ಶ್ರವಣ ಮಾಡಬಯಸುವವನು ಉತ್ತಮ ಗುರುವನ್ನು ಆಶ್ರಯಿಸಬೇಕು. ಆಶ್ರಯಿಸಿದ ನಂತರ ಶ್ರವಣ ಮಾಡಿದ ವಿಚಾರವನ್ನು ನಂತರ ಮನನ ಮಾಡಬೇಕು. ಆನಂತರ ಚಿಂತನ ಮಾಡಬೇಕು ಎಂದು ಬೃಹದಾರಣ್ಯಕ ಉಪನಿಷತ್ ಹೇಳುತ್ತದೆ. ಇದು ಕೇಳಿದ ನಂತರದ ಮಾರ್ಗಸೂಚಿ ಯಾಯಿತು. ಕೇಳಲು ಬರುವ ಮುನ್ನ ಕೆಲವು ಮಾರ್ಗ ಸೂಚಿಗಳನ್ನು ಅಗತ್ಯವಾಗಿ ಅನುಸರಿಸಬೇಕು. ಆ ಬಗ್ಗೆ ಸ್ವಲ್ಪ ಚಿಂತಿಸೋಣ.

ಸತ್ಯಾಸತ್ಯತೆಯನ್ನು ಅರಿಯುವ ವಿವೇಕವಿರಬೇಕು. ಕ್ಷಣಿಕ ಸುಖಗಳು ನಮ್ಮ ಅಧಃಪತನಕ್ಕೆ ದಾರಿಮಾಡುವವು. ಕ್ಷಣಿಕ ಸುಖಗಳ ಆಸೆಯನ್ನು ದೂರಾಗಿಸಿರಬೇಕು. ಭೋಗದೃಷ್ಟಿ ತುಂಬಾ ಅಪಾಯಕಾರಿ. ನಮ್ಮ ಬದುಕಿನ ಹಾದಿ ತಪ್ಪಿಸಿ ಬಿಡುವುದು. ಭೋಗ್ಯದೃಷ್ಟಿ ದೂರಾಗದೆ ಹೋದರೆ ಸತ್ಯವನ್ನು ತಿಳಿಯುವ, ಧರ್ಮದ ದಾರಿ ಹುಡುಕುವ ಅಭಿಲಾಷೆಯೇ ಶೂನ್ಯವಾಗಿ ಬಿಡುವುದು. ನಮಗೆ ಸದಾ ಪರರ ಮೇಲೆ ಕಣ್ಣು. ಇಹದ ಬದುಕು ಹೇಗಾದರು ಇರಲಿ, ಎಂತಾದರು ಇರಲಿ ಪರರ ಸುಖ ನೆನಸಿ ಚಪ್ಪರಿಸುವೆವು. ಈ ವೃತ್ತಿ ಖಂಡಿತಾ ಸಲ್ಲದು. ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು. ಇಹದಲ್ಲಿ ನಾವು ಕೀರ್ತಿ ಶನಿಯ ಬೆನ್ನೇರಿ ಹೋಗುವುದು ಅಧಿಕ. ನಾನು–ನನ್ನದು ಎಂಬ ಸ್ವಾರ್ಥ ದಾಹ ಬೇರೆ. ಈ ಬಗ್ಗೆ ವಿರಾಗವಿರಬೇಕು. ಕಂಡದ್ದಕ್ಕೆಲ್ಲಾ ಬಾಯಿ ಬಿಡುವ ಪರಿಪಾಠ ಬಿಡಬೇಕು. ಶಮದಮಾದಿ ವ್ರತ ಸ್ವೀಕರಿಸಬೇಕು. ಕಷ್ಟ ಸಹಿಷ್ಣುತೆ ಉಸಿರಾಗಬೇಕು. ಮರುಗುವುದರಿಂದ,

ಕೊರಗುವುದರಿಂದ ಬೇಗ ನಾಶಗೊಳ್ಳುತ್ತೇವೆ. ಏಕಾಗ್ರತೆ ಇರಬೇಕು.

ಉಪನಿಷತ್ತಿನಲ್ಲಿ ಯಾವ ದೇವ-ದೇವಿಯವರನ್ನು ಉಪಾಸನೆ ಮಾಡೆಂದು ಉಪದೇಶಿಸಿಲ್ಲ. ಕಂಡ ಕಂಡ ದೇವರ ಬೆನ್ನು ಹತ್ತುವುದು ತರವಲ್ಲ. ಸಮಯಕ್ಕೆ ಅನುಗುಣವಾಗಿ ದೇವರನ್ನು ಬದಲಾಯಿಸುವುದೂ ಸರಿಯಲ್ಲ. ಉಪನಿಷತ್ತು ಪ್ರಣವೋಪಾಸನೆಯನ್ನು ಎತ್ತಿ ಹಿಡಿಯುತ್ತದೆ. ಪ್ರಣವೋಪಾಸನೆಯಿಂದ ಪರಬ್ರಹ್ಮನೆಡೆಗೆ ಧಾರಾಳವಾಗಿ ಹೋಗಬಹುದು. ಓಂಕಾರವನ್ನು ಬ್ರಹ್ಮ ಎನ್ನುತ್ತದೆ ಕಠಕೋಪನಿಷತ್.

ಮಾನವ ಜನ್ಮ ದೊಡ್ಡದು. ಇದನ್ನು ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ಎನ್ನುತ್ತಾರೆ ಪುರಂದರದಾಸರು. ಈ ಜನ್ಮವನ್ನು ಹಾಳು ಮಾಡಿಕೊಳ್ಳುವವರೇ ಹೆಚ್ಚು. ಇಂದ್ರಿಯಗಳ ದಾಸರಾಗಿ ಅಜ್ಞಾನದಲ್ಲಿ ಕರಗಿ ಹೋದರು. ಆಶಾ ಪಿಶಾಚಿಗಳಾಗಿ ಬದುಕನ್ನು ನಿರರ್ಥಕ ಪಡಿಸಿಕೊಂಡರು. ಉಪನಿಷತ್ ನಮ್ಮನ್ನು ಮೇಲೇರಲು ಪ್ರಚೋದಿಸುತ್ತದೆ. ಪರಬ್ರಹ್ಮನನ್ನು ಅರಿಯಲು ಒತ್ತಾಯಿಸುತ್ತದೆ. 'ಪರಬ್ರಹ್ಮನನ್ನು ಅರಿತವನು ಬ್ರಹ್ಮವೇ ಆಗುವನು' ಎಂದು ಉಪನಿಷತ್ತು ಮಾನವನನ್ನು ಪ್ರಚೋದಿಸುವುದರಿಂದ ಅದನ್ನು ಶ್ರೇಷ್ಠವೆನ್ನದೆ ವಿಧಿಯಿಲ್ಲ. ಮಾನವನ ಕಲ್ಯಾಣ ಉದ್ಧಾರ ಬಯಸುವ ಉಪನಿಷತ್ತಿನ ಉಪನ್ಯಾಸ ಸವಿಯಲು ಸಜ್ಜಾಗೋಣ.

❋

ಎಲುಬಿಲ್ಲದ ನಾಲಿಗೆ, ಬಲವಿಲ್ಲದ ಬಡವಂಗೆ
ತೊಲೆಕಂಬವಿಲ್ಲ ಗಗನಕ್ಕೆ ದೇವರಲಿ
ಕುಲಭೇದವಿಲ್ಲ ಸರ್ವಜ್ಞ

* * *

ದಾನಭಕ್ತಿಗಳಲ್ಲಿ 'ನಾನು' ಮರೆದಿರಬೇಕು
ನಾನೆಂಬ ರೋಗ ನೀಗಿದರೆ, ಗುರುಬೋಧೆ
ತಾನೆ ಫಲಿಸುವುದು ಸರ್ವಜ್ಞ

* * *

ಬಂದಸುಖದುಃಖವನು ಕಂದದುಬ್ಬಿದೆ ನುಂಗಿ
ಇಂದುಧರನಾಜ್ಞೆಯೆಂದಿಹಗೆ ಗುರುಕೃಪೆಯು
ಎಂದಿಗೂ ಬಿಡದು, ಸರ್ವಜ್ಞ

## ತಿರುಕ್ಕುರುಳ್

ಕನ್ನಡ ಅನುವಾದ : ನ. ಮುನಿಸ್ವಾಮಿ
ಅಧ್ಯಾಯ -೧೪

### ಆಚಾರ

ಸದಾಚಾರವದು ಹಿರಿಮೆಯನು ತರುವುದು; ಅದರಿಂದದನು
ಪ್ರಾಣಕಿಂತ ಹಿರಿದಾಗಿ ರಕ್ಷಿಸುವುದು.

ಕಷ್ಟಪಟ್ಟಾದರೂ ಆಚಾರವನು ರಕ್ಷಿಸುವುದು; ಹಲವು ಶಾಸ್ತ್ರಗಳ
ಆರೈದರೂ ಬಾಳಿಗದೇ ನೆರವಹುದು.

ಆಚಾರದಿಂದಿರುವುದೇ ಕುಲೀನತೆಯೆನಿಸಿಕೊಳುವುದು;
ಅನಾಚಾರವದು ಹೀನಕುಲವಾಗಿ ಮಾಡಿಬಿಡುವುದು.

ಮರೆತರೂ ಕಲಿತುಕೊಳಬಹುದು ವೇದವನು; ವೇದಜ್ಞನ
ಕುಲದ ಆಚಾರ ಕುಂದಿದರೆ ಕುಂದುವುದವನ ಹಿರಿಮೆ

ಅಸೂಯೆ ಉಳ್ಳವಗೆ ಐಸಿರಿಯು ಸೇರದು;
ಆಚಾರವಿಲ್ಲದವಗೆ ಹಿರಿಮೆಯಿರದು.

ಸದಾಚಾರವನು ಕೈಬಿಡರು ಬಲ್ಲಿದರು, ದುರಾಚಾರದಿಂದ
ಬರುವ ದೋಷವನು ಅರಿತು.

ಸದಾಚಾರದಿಂದ ಹೊಂದುವರು ಹಿರಿಮೆಯನು;
ದುರಾಚಾರದಿಂದೆ ಹೊಂದುವರು ನಿಂದೆಯನು.

ಸುಖಬಾಳಿಗೆ ಬೀಜವಾಗುವುದು ಸದಾಚಾರ; ಅನಾಚಾರ
ಎಂದಿಗೂ ದುಃಖವನು ತರುವುದು.

ಆಚಾರವಂತನಿಗೆ ಅಸಾಧ್ಯವಹುದು, ಕೆಟ್ಟ ನುಡಿಯನು
ಬಾಯಿತಪ್ಪಿಯೂ ನುಡಿವುದಕೆ.

ಲೋಕದೊಂದಿಗೆ ಹೊಂದಿ ನಡೆವುದನು ಕಲಿಯದವರು,
ಹಲವ ಕಲಿತರೂ ಅರಿವಿಲ್ಲದವರು.





## ಭಕ್ತಿ-ಮುಕ್ತಿ

-ನಾ.ಮ. ಬಸವರಾಜಯ್ಯ, ನಾಗರಹಾಳು ಅಂಚೆ, ಹಚ್ಚೊಳ್ಳಿ ಮಾರ್ಗ, ಬಳ್ಳಾರಿ ಜಿಲ್ಲೆ.

ಭಕ್ತಿಯಿಲ್ಲದ ಭಕ್ತನು
ಮಧುವಿಲ್ಲದ ಜೇಂಗೊಡದಂತೆ ಕಾಣಯ್ಯಾ
ಶಕ್ತಿಯಿಲ್ಲದ ಭಕ್ತನು
ಗೊಬ್ಬರವಿಲ್ಲದ ಹೊಲಗದ್ದೆಯಂತೆ, ಕಾಣಯ್ಯಾ
ಮುಕ್ತಿಯ ಪಥಪಿಡಿಯದ ಭಕ್ತನು
ಬೆಳಕಿಲ್ಲದ ಮನೆಯಂತೆ ಕಾಣಯ್ಯಾ
ಭ್ರೂಲತಾ ಪುರೀಶ ಕರ್ತೃ
ಜಗದ್ಗುರು ಗುರುಸಿದ್ದೇಶ್ವರಾ

-ಮೂಜಗಂ(ಚಿತ್ಸುಮನ)

'ನಿಜ ಭಕ್ತಿಯಲ್ಲಿ ಅದ್ಭುತ ಶಕ್ತಿ'. ಅದರಿಂದಲೇ ಭವದ ಮುಕ್ತಿ' ಎಂಬ ಶರಣರ ಸೂಳ್ನುಡಿ, ಸಗ್ಗದ ನುಡಿ. ಅಮೃತ ನುಡಿ. ಅನುಭಾವದ ನುಡಿ. ಭಕ್ತಿ ಭಕ್ತ ಒಂದರೊಳಗೊಂದು ಸಂದಿಲ್ಲದ ಅವಿನಾಭಾವ ಸಂಬಂಧ. ಭಕ್ತಿ ಎಂಬುದು ಹೊರಗೆ ತೋರದು, ಒಳಗೆ ಕಾಣದು. ಭಕ್ತರಿಗೆ ಆಸ್ತಿಯಾವುದೆಂದರೆ ಭಕ್ತಿ. ಮಧುವಿಲ್ಲದ ಜೇಂಗೊಡದಂತೆ ಎಂದು ದೃಷ್ಟಾಂತ ಕೊಟ್ಟಿದ್ದಾರೆ. 'ಭಕ್ತಿ ಎಂಬುದು ಪ್ರೇಮದ ಸಫಲತೆ ನೋಡಾ' ಎಂದು ತ್ರಿಭಾಷಾ ಕವಿ, ಪುಟ್ಟರಾಜರ ನುಡಿ ಆದರ್ಶವಾದದ್ದು. ಭಗವದ್ಭಕ್ತನಲ್ಲಿ ಶಕ್ತಿ ಇರಬೇಕು, ಎಂಥಾ ಶಕ್ತಿ, ಕಲ್ಲು, ಗುಂಡು, ಇರಿಸುಗಳನ್ನು ಎತ್ತುವುದೇ ಅಲ್ಲಲ್ಲ. ಪೂಜ್ಯ ಗುರುಹಿರಿಯರಲ್ಲಿ ಪ್ರೇಮ, ದಯೆ, ವಿನಯ, ಸದಾಚಾರ, ಸದ್ವಿಚಾರ, ಸಂಯಮಗಳಿಂದೊಡಗೂಡಿ ಶರಣರ, ಸಂತರ ಸೂಳ್ನುಡಿಗಳನ್ನು ತನ್ನ ನಡೆಯಲ್ಲಿ ತರುವುದೇ ಶಕ್ತಿ. ಇಂಥಾ ಗುಣಗಳನ್ನು ನಡೆಯಲ್ಲಿ ಒಲಿಸಿಕೊಂಡಾತನೇ ಶಕ್ತಿವಂತನೆಂದು ಹೇಳಬಹುದು. ಒಳ್ಳೆ ನುಡಿಗಳೇ ಗೊಬ್ಬರದಂತೆ, ಗೊಬ್ಬರ ಹಾಕದಿದ್ದರೆ, ಹೊಲಗದ್ದೆಗಳು ಬೆಳೆಯಲಾರವು. ಬೆಳೆದರೂ ಅಷ್ಟೊಂದು ಫಸಲು ಕೊಡಲಾರವು. ಒಳ್ನುಡಿಗಳು ನಡೆಯಲ್ಲಿ ಬಾರದ ಭಕ್ತಿವಂತನಾದರೆ, ಅವನ ಮನಸ್ಸು ಚಂಚಲವಾಗಬಹುದು. ಏಕಚಿತ್ತವಿಲ್ಲದೆ, ಅನೇಕತ್ವದ ಕಡೆಗೆ ಹರಿದು ಹಂಚಿಹೋಗಬಹುದು. ಆದ್ದರಿಂದ ಗುರುಸಾನ್ನಿಧ್ಯದಲ್ಲಿ ಮಿಂದು ಮಡಿಯುಟ್ಟು ಅನುಭವದ ಪಥವಿಡಿದು ಮುಂದೆ ಸಾಗಿದರೆ ಮುಕ್ತಿ ಎಂಬ ಬೆಳಕು ಕಾಣುವುದು. ಭಕ್ತನಿಗೆ ಗುರು ಬೇಕು. ಗುರುವಿಗೆ ಶಿಷ್ಯನಿಗೆ ದಾರಿ ತೋರಿಸಲು ಗುರು ಬೇಕು. ಇದುವೆ ಬೆಳಕು. ಬೆಳಕಿಲ್ಲದ ಮನೆ ಆಗಬಾರದು. ಕತ್ತಲು ಅಪರಿಮಿತ ಕತ್ತಲು ಆಗದೆ, ಬೆಳಕಿನ ಪರಂಜ್ಯೋತಿಯ ಬೆಳಕು ಎಲ್ಲೆಲ್ಲೂ ಪಸರಿಸಲಿ, ಎಂಬ ತಾತ್ವಿಕ ಚಿಂತನೆಯೇ ಶ್ರೀ ಶರಣ, ದಾಸರ, ಸಂತರ ಸಂದೇಶವಾಗಿದೆ.

ಭಕ್ತಿಯಿಲ್ಲದ ನರನ ಬಾಳುವೆ ಅಸ್ಥಿರ. 'ಭಕ್ತಿಯಿಲ್ಲದ ಮೇಲೆ ಮುಕ್ತಿಗಾಸ್ಪದವಿಲ್ಲವಾಗಿ ಸದ್ಭಕ್ತ ನಧಿಕಾ' ಎಂದು ಮೈಲಾರ ಬಸವಲಿಂಗ ಶರಣರ ಮಾತು ಮುತ್ತಾಗಿವೆ. ಈ ಮಾತಿಗೆ ಸಕಲ ಧರ್ಮ ಸ್ಥಾಪಕರ, ಭಗವದ್ಭಕ್ತರ ನುಡಿಗಳು ಆಧಾರವಾಗಿವೆ. ಎಲ್ಲಾ ಧರ್ಮದವರು ಒಂದಾಗುವುದನ್ನು ಹೇಳುತ್ತಾರೆ. ಎರಡಾಗುವುದಲ್ಲ. ಭಿನ್ನತೆಯಲ್ಲಿ ಸುಖವಿಲ್ಲ. ಏಕತೆ ಸಮರಸಾನಂದ ಪ್ರಾಪ್ತಿಯಾಗುತ್ತದೆ. ನಿಜವಾದ ಭಕ್ತಿವಂತನು, ನಿರಾಶಾಮಯನು, ನಿರಪೇಕ್ಷನು, ನಿತ್ಯ ನೂತನ ಸತ್ಯಪ್ರಿಯನು, ಸದಾ ಸಮಾಜದ ಹಿತಚಿಂತಕನು. ಏನಾದರೂ ಪರೋಪಕಾರ ಮಾಡಬೇಕೆನ್ನುವವನು, ಎಲೆ ಮರೆಯ ಕಾಯಿಯಂತೆ, ಬೂದಿ ಮುಚ್ಚಿದ ಕೆಂಡದಂತೆ ಅಂದರೆ ಕಾಯಿಯಾಗದೆ, ಕೆಂಡವಾಗದೆ, ಮಾತಿನಲ್ಲಿ, ಪ್ರೇಮದಲ್ಲಿ ಹಣ್ಣಾಗಿ ಮತ್ತು ಜ್ಯೋತಿಯಾಗಿ ಬೆಳಗುವ ಆಶೆ ಉಳ್ಳವನಲ್ಲಿ ಅದ್ಭುತ ಶಕ್ತಿ ಅಡಗಿರುತ್ತದೆ. ಏಕೆಂದರೆ ಅಂಥಾ ನಿಜ ಭಕ್ತನೇ ಶರಣ, ದೇವ ಮಾನವನೆಂದು ಪರಿಗಣಿಸಬಹುದು. ಬಸವಣ್ಣನಲ್ಲಿ ಭಕ್ತಿ ಭಂಡಾರವಾಗಿದ್ದುದರಿಂದ ಅಂದು, ಸಮಾಜವನ್ನು ಮೇಲೆತ್ತರಕ್ಕೆ ಒಯ್ದನು. ಅವನ ಭಕ್ತಿಯ ಬೆಳಕೇ ಕಲ್ಯಾಣದ ಬೆಳಕು. ಅನುಭವ ಮಂಟಪದಲ್ಲಿ ಚರ್ಚಿತವಾದ ವಿಷಯಗಳಲ್ಲಿ 'ಭಕ್ತಿ' ಎಂಬುದು ಮಹತ್ವದ ವಿಷಯ. ಇದಕ್ಕೆ ಇನ್ನೊಂದು ಅರ್ಥಶೀಲವೆಂದರೂ ತಪ್ಪಲ್ಲ. ಶೀಲವೆಂದರ್ತೆ ಆಡಿದ ಮಾತನ್ನು ಮನಸಾ ಪರಿಪಾಲಿಸುವುದು. ಭಕ್ತಿ ಎಂಬುದು ಹೊರನೋಟಕ್ಕೆ ಕಾಣದಿದ್ದರೂ ಅಂತರಂಗದ ಅನುಭಾವಕ್ಕೆ ಪೂಜ್ಯವಾಗಿದೆ.

'ರಾಗದಿಂ ಬೇರಿನ್ನು ಭವ ಬೀಜಮುಂಟೆ?' ಎಂದು ನಿಜವನರುಹಿದ ನಿಜಗುಣರ ವಾಣಿ ನಮ್ಮನ್ನು ಜಾಗೃತಗೊಳಿಸುತ್ತದೆ. ರಾಗವೆಂದರೆ ಪ್ರೇಮ ವಾಸನೆ,

ಅನುರಕ್ತಿಯೆಂದು ಅರ್ಥಗಳುಂಟು. ಸಾಂಸಾರಿಕವಾದ ಮೋಹ ಅನುರುಕ್ತಿಗಳು ಆಧ್ಯಾತ್ಮ ಮಾರ್ಗಕ್ಕೆ ಅಡ್ಡಿಯಾಗುತ್ತದೆ. ಆದ್ದರಿಂದ ಪೂಜ್ಯರಲ್ಲಿಟ್ಟ ಅನುಗಾರವೇ, ಭಕ್ತಿಯಾಗಿ, ಮುಕ್ತಿಗೆ ಮೂಲವಾಗುವುದು. 'ಭಕ್ತೇರ ಸಾಧ್ಯಂ ನಹಿ ಕಿಂಚಿದಸ್ತಿ' ಭಕ್ತಿಗೆ ಅಸಾಧ್ಯವಾದ ವಸ್ತು ಯಾವುದೂ ಇಲ್ಲ. ಶ್ರದ್ಧೆ, ನಿಷ್ಠೆಗಳು ಭಕ್ತಿಯಲ್ಲಿ ಮೈಗೂಡಿರಬೇಕು. ನಿರಾಡಂಭಿಕ ಭಕ್ತಿ ಮುಕ್ತಿಯ ಸಹಕಾರಿಯಾಗುವುದು. ವರಕವಿ ವಾಗೀಶ ಪಂಡಿತಾರಾಧ್ಯರು

'ಭಕ್ತಿ ಇಲ್ಲದೆ ಪೂಜೆ ಮಾಡಿದರೆ ಫಲವಿಲ್ಲ'
ಶಕ್ತಿ ಇಲ್ಲದೆ ವ್ಯಾಜ್ಯ ಮಾಡಿದರೆ ಫಲವಿಲ್ಲ' ಎಂದಿದ್ದಾರೆ.

ನಿಜಭಕ್ತಿಯಿಲ್ಲದೆ, ನಿಜ ಪೂಜೆ ಸಾಧಿಸದು. ಸಿದ್ಧಿಸದು. ಆಡಂಬರದ ಪೂಜೆಯಿಂದ ಭವದ ಮುಕ್ತಿಯಾಗಲಾರದು. ಮುಕ್ತಿ ಎಂದರೆ ಬಿಡುಗಡೆ ಎಂಬರ್ಥ ಜೀವಭಾವದಿಂದ ಬಿಡುಗಡೆಯಾಗಿ ಶಿವಭಾವವುಳ್ಳವನಾಗುವುದು.

ಹಿಂದಿನ ಸಾಧು ಸಂತರ, ಋಷಿಗಳ, ಶರಣರ, ದಾಸರ, ನಿಜಭಕ್ತಿಯಿಂದ ದೇವರನ್ನು ಒಲಿಸಿದುದರಿಂದಲೇ ಭವದ ಮುಕ್ತಿಯನ್ನು ಕಂಡರು. 'ಎಣಿಸಿತಿರ್ಪುದು ಬೆರಳು, ಗುಣಿಸಿತಿರ್ಪುದು ಜಿಹ್ವೆ, ಮನ ಹೋಗಿ ಹಲವ ನೆನೆದರದು ಹಾಳೂರ ಶುನಕ ನಂತಕ್ಕೂ' ಎಂಬುದೂ. 'ಕೊಲುವ ಕೈಯೊಳು ಪೂಜೆ, ಮೆಲುವ ಬಾಯೊಳು ಮಂತ್ರ, ಸಲೆಪಾಪ ವೆರೆದ ಮನದೊಳಗೆ ಪೂಜಿಪನೆ ಹೊಲೆಯ ಕಾಣಯ್ಯ' ಎಂಬ ಈ ಬಗೆಯ ಸರ್ವಜ್ಞನ ವಚನಗಳಲ್ಲಿ ವಿಡಂಬನೆ ತೀಕ್ಷ್ಣವಾಗಿದೆ. ❋

**ಶ್ರೀವಾಣಿ**

ನಿಜವಾದ ಭಕ್ತಿಯುಳ್ಳವರಿಗೆ ಪರಮಾತ್ಮ ಬಹಳ ಸುಲಭವಾಗಿ ಒಲಿಯುತ್ತಾನೆ. ಈ ಬಗ್ಗೆ ಅನೇಕ ಕಥೆಗಳುಂಟು. ಪರಮಾತ್ಮನಿಗೆ ಅರ್ಪಣೆ ಮಾಡಿಕೊಳ್ಳಬೇಕು. ಅಂತರಂಗ ಬಹಿರಂಗ ಶುದ್ಧವಾಗಿರಬೇಕು. ಅಂತಹವರಿಗೆ ಪರಮಾತ್ಮ ಒಲಿಯುತ್ತಾನೆ. ಪರಮಾತ್ಮನ ದೃಷ್ಟಿಯಲ್ಲಿ ಎಲ್ಲರೂ ಒಂದೇ. ಅದಕ್ಕಾಗಿ ಆದಷ್ಟು ಮಟ್ಟಿಗೆ ಚಿಕ್ಕ ವಯಸ್ಸಿನಿಂದ ಒಳ್ಳೆಯ ಭಕ್ತಿ ಬೆಳೆಸಿಕೊಂಡು ಬರಬೇಕು.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೫೦೦ ರೂ./೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

**ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ** ಬಾಕಿ ಆಜೀವ ಚಂದಾವನ್ನು ನಗದು/ ಎಂ.ಓ/ ಚೆಕ್/ ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

**ಪ್ರಕಾಶಕರು**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.





## ವೃದ್ಧಾಪ್ಯ ಶಾಪವಲ್ಲ ಶಿವದರ್ಶನ ಶಿಖರ!

-ಪ್ರೊ. ಜಿ.ಹೆಚ್. ಹನ್ನೆರಡುಮಠ, #೫, ಮಾವು ಮಲ್ಲಿಗೆ, ಯೋಗಭವನ, ಬನ್ನೇರುಘಟ್ಟ ದಾರಿ, ಬೆಂಗಳೂರು.

**ಅಕ್ಟೋಬರ್ ೧ರಂದು ಹಿರಿಯ ನಾಗರೀಕರ ಅಂತರಾಷ್ಟ್ರೀಯ ದಿನಾಚರಣೆ ಇದ್ದುದರಿಂದ ತನ್ನಿಮಿತ್ತ ಈ ವಿಶೇಷ ಲೇಖನ.**

ಕ್ರಿಯಾಶೀಲವಾದ ಬದುಕಿನ ಕ್ಷಣಕ್ಷಣವೂ ಅರ್ಥಪೂರ್ಣ, ಸುಂದರ, ಶಿವಾನುಭವದ ಸೊಬಗಿನ ಸೋಪಾನ!

'ಎನ್ನ ಕಾಯದ ಕತ್ತಲೆಯ ಕಳೆಯಯ್ಯಾ, ಎನ್ನ ಜೀವದ ಜಂಜಡವ ಮಾಣಿಸಯ್ಯಾ...' ಎಂದು ಅಕ್ಕಮಹಾದೇವಿ ಆತ್ಮಪರಿವರ್ತನೆಯ ದಾರಿಯಲ್ಲಿ ಸಾಗಿಬಂದ ಚೈತನ್ಯ ಚೇತನ.

ಜಡತೆ-ಜಾಡ್ಯತೆ ಮೌಢ್ಯತೆಗಳು ನಮ್ಮ ಅಂತರಾತ್ಮದ ಜಂಗಮಶಕ್ತಿಯ ಬಹುದೊಡ್ಡ ಅಪಾಯಗಳು. ಆರೋಗ್ಯ-ಅನಾರೋಗ್ಯಗಳು ಮೊದಲು ಬೇರುಬಿಡುವುದೇ ನಮ್ಮ ಮಾನವ ಗರ್ಭದಲ್ಲಿ. 'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ...' ಎಂಬ ಅಕ್ಕಮಹಾದೇವಿಯ ವೈಜ್ಞಾನಿಕ ನಿಲುವು ಎಂಥಾ ಅಮೋಘ. ಲೋಕದ ಹೋ-ಹುಯ್ಲುಗಳಿಗೆ ರವಿ ಕಾರಣವಾದರೆ, ಪಂಚೇಂದ್ರಿಯಗಳ ಶೀತಲತೆ-ಪ್ರಶಾಂತತೆಗೆ ಮನವೇ ಮೂಲಬೀಜ.

ವೃದ್ಧಾಪ್ಯವು ಇಂಥ ಆತ್ಮಾನುಭೂತಿಯ ಸುಂದರ ಹೂದೋಟ. ದೇಹದಲ್ಲಿ ಸಾಗುವ ಜೈವಿಕ ಸ್ಥಿತ್ಯಂತರಗಳಿಗೆ ಪ್ರಕೃತಿಯ ಅವಸ್ಥಾಂತರಗಳು ಕಾರಣವಾದರೆ, ಅಂತರಂಗದ ವ್ಯರ್ಥ-ಸಮರ್ಥಗಳ ಬಗಾಟಬಗದಿ ಆಟಕ್ಕೆ ಮನವೇ ಬೀಜ. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ' ಎಂಬ ಉಪನಿಷದ್ವಾಕ್ಯ ಈ ಒಳಾಂಗಣದ ಅಂಕಣವನ್ನು ನಿರ್ದೇಶಿಸಿದೆ.

ಮುಪ್ಪು ತಪ್ಪು, ಯೌವನ ಮಾತ್ರ ಒಪ್ಪು... ಎಂಬುದು ಅವೈಜ್ಞಾನಿಕ ಭ್ರಾಂತಿ!. ಅಸಂಖ್ಯಜನ ತಮ್ಮ ವಯಸ್ಸಿನ ಅರವತ್ತರ ನಂತರ ಅದ್ಭುತ ಸಾಧನೆಗಳನ್ನು ಮಾಡಿದ ನಿದರ್ಶನಗಳಿವೆ. ಅಪರ ವಯಸ್ಸಿನ ರಾಷ್ಟ್ರ ನಾಯಕರು ಮನುಕುಲಕ್ಕೆ ಮಾರ್ಗದರ್ಶಿಗಳಾದ ಜ್ವಲಂತ ನಿದರ್ಶನಗಳಿವೆ. ಸಮತೂಕದ ಸಹಜ ಸಾತ್ವಿಕ ಆಹಾರದೊಂದಿಗೆ ಸಮತ್ವ-ಸಮನ್ವಯದ ನಿರಾಲಂಬ ಸ್ಥಿತಿ ರಸಾಯನವಾಗುವುದೇ ವೃದ್ಧಾಪ್ಯದ ವೃಂದಾವನದಲ್ಲಿ!.

ನನ್ನ ಅಜ್ಜ ೧೦೫ನೇ ವಯಸ್ಸಿನವರೆಗೂ ಅಚ್ಚುಕಟ್ಟಾದ ಜೀವನ ಬದುಕಿದ. ಸಕ್ಕರೆ ಖಾಯಿಲೆ, ರಕ್ತದೊತ್ತಡ ಇತ್ಯಾದಿ ಯಾವುವೂ ಅವನ ಆಸುಪಾಸು ಸುಳಿಯಲಿಲ್ಲ. ೧೦೫ನೇ ವಯಸ್ಸಿನವರೆಗೂ ಕಣ್ಣು ನಿಚ್ಚಳ, ಕಿವಿ ಸಹಜ, ಕಂಠ ಕಂಚಿನ ಕಂಠ, ಹಸಿವೆ ಸಹಜ. ಅವನ ಜೀವನದ ರಹಸ್ಯವೇ ಮಳೆ-ಚಳಿ-ಗಾಳಿ-ಬಿಸಿಲು-ಬೆವರು-ಮಣ್ಣಿನೊಂದಿಗೆ ನಿರಂತರ ದುಡಿಮೆ ಹಾಗೂ ಶಿವಧ್ಯಾನ! ನನ್ನ ಅಜ್ಜಿಯಂತೂ ಇನ್ನೂ ಅದ್ಭುತ. ತನ್ನ ೯೭ನೇ ವಯಸ್ಸಿಗೆ ಸಂಪೂರ್ಣ ನಿರೋಗಿಕಾಯಳಾಗಿ ಶರೀರ ಬಿಟ್ಟಳು. ಅವಳು ಸಾಯುವುದಕ್ಕೆ ಒಂದು ತಿಂಗಳ ಮುನ್ನ.. 'ಇನ್ನು ಒಂದು ತಿಂಗಳಿಗೆ ಶರೀರ ಬಿಡುತ್ತೇನೆ...' ಎಂದು ಮನೆಮಂದಿಗೆಲ್ಲ ಹೇಳಿದಳು. ಮರಣಕ್ಕೆ ೧೫ ದಿನ ಮುನ್ನ.... 'ಇನ್ನು ಎರಡು ವಾರಕ್ಕೆ ಸ್ವಾಮಾರ ದಿನಾ ಶರೀರ ಬಿಡುತ್ತೇನೆ. ಆಗ ನೀವು ಯಾರೂ ಅಳಬಾರದು. ಅತ್ತರೆ ಆತ್ಮ ಬಂಧಿತವಾಗುತ್ತದೆ...' ಎಂದು ಹೇಳಿದಳು. ಮರಣದ ಗಂಟೆ ಇನ್ನು ಒಂದು ವಾರ ಉಳಿದಾಗ... 'ನನ್ನ ಸಮಾಧಿ ಬೇಗನೇ ಮಧ್ಯಾಹ್ನ ೧೨ಕ್ಕೆ ಮಾಡಿ ಮುಗಿಸಿರಿ. ತಡಮಾಡಿದರೆ ದೂರದ ಊರಿನಿಂದ ಬಂದವರಿಗೆ ಮರಳಿ ಹೋಗುವುದು ತೊಂದರೆ ಆಗುತ್ತದೆ...' ಅಂದಳು. ಸಾಯುವುದು ಕೆಲ ಗಂಟೆಗಳಿದ್ದಾಗ ಮನೆ ಮಂದಿಗೆಲ್ಲರಿಗೆ 'ನೀವು ಇಂದು ಬೇಗ ಊಟಾ ಮಾಡಿ ತಯಾರ ಆಗಿರಿ... ಇಲ್ಲವಾದರೆ ಮುಂದೆ ಹಸಗೊಳ್ಳುವಿರಿ..' ಎಂದಳು. ಸಾಯುವುದು ಐದು ನಿಮಿಷವಿದ್ದಾಗ 'ನೀರು' ಅಂದಳು. ಅವಳಿಗಾಗಿ ಬಿಸಿನೀರು ತರಲು ಎದ್ದ ಮೊಮ್ಮಗಳಿಗೆ...' ಬೇಡಾ... ಈ ಆತ್ಮ ಹೊಂಟೈತಿ... ಬಿಸಿನೀರೇನು ತಣ್ಣೀರೇನು... ಇದ್ದದ್ದ ತರ್ರಿ..' ಅಂದಳು. ಬಾಯಲ್ಲಿ ತಣ್ಣೀರು ಹಾಕಿದ ಕೆಲ ನಿಮಿಷಗಳಲ್ಲಿ ಅವಳ ಆತ್ಮ ಮುಂದೆ ಪ್ರಯಾಣ ಬೆಳೆಸಿತು! ಇದೇ ಮಾನಸಿಕ ಸಮತೂಕ- ಸಮಚಿತ್ತದ ಪ್ರಾಯೋಗಿಕ ಫಲ. ಇದು ಕೇವಲ ಗ್ರಾಂಥಿಕ ಶಿಕ್ಷಣದಿಂದ ಬರಲಾರದು, ಆತ್ಮನ ಸಂಸ್ಕೃತಿ-ಸಂಸ್ಕಾರದಿಂದ ಮಾತ್ರ ಸಾಧ್ಯ.

ವೃದ್ಧಾಪ್ಯವು ಶಿವನ ಸುಂದರ ಹೂದೋಟವಾಗಬಲ್ಲುದೆಂಬುದಕ್ಕೆ ೧೦೫ ವರ್ಷಗಳ ನಮ್ಮ ಮಧ್ಯದ ಹಿರಿಯ ಶಿವಾನುಭವಿ ಶ್ರೀ ಚೇತನ ತುಮಕೂರು ಶ್ರೀ ಸಿದ್ಧಗಂಗಾ

ಮಠದ ಶ್ರೀಗಳು ಪ್ರತ್ಯಕ್ಷ ಸಾಕ್ಷಿ. ಇಂದಿಗೂ ಹತ್ತಾರು ಸಾವಿರ ವಿದ್ಯಾರ್ಥಿಗಳ ಮಧ್ಯ ಅವರು ತಾವೇ ನಡೆದು ಬಂದು ಪ್ರಾರ್ಥನೆ-ಪ್ರಸಾದ-ಚಿಂತನೆಗಳಲ್ಲಿ ಪಾಲ್ಗೊಳ್ಳುವ ಅದ್ಭುತ ನಾವು ಕಾಣಬಹುದು. ಅವರಿಗೆ ವೃದ್ಧಾಪ್ಯವು ಶಾಪವಲ್ಲ, ವಿಶ್ವಕ್ಕೆ ನೀಡುವ ಜ್ಞಾನದ ಪಾಕ!.

ನಮ್ಮ ಹಿರಿಯರಾದ ವೃದ್ಧರ ಬದುಕು-ಭಾವನೆಗಳನ್ನು ಸಾಮಾಜಿಕ ಆಯಾಮದಿಂದ ಅವಗಾಹಿಸುವುದು ಈಗ ಅತ್ಯಗತ್ಯವಾಗಿದೆ. ೬೦ ವರ್ಷಗಳ ಹಿಂದೆ ನಮ್ಮಲ್ಲಿರುವ ಅಜ್ಜ-ಅಜ್ಜಿಯರಿಗೆ ಗೌರವಯುತವಾದ ಸ್ಥಾನಮಾನಗಳಿದ್ದವು. ಆ ಅಜ್ಜ-ಅಜ್ಜಿಯರೂ ತಮ್ಮ ಮೊಮ್ಮಕ್ಕಳ ಮರಿಮಕ್ಕಳ ಪೋಷಣೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಪುಟ್ಟ ಕಂದಮ್ಮಗಳಿಗೆ ತಾತಾ-ಅಜ್ಜಿ ಅಂದರೆ ಸುಂದರ ಕನಸಿನಷ್ಟು ಸುಖ. ಆದರೆ ಕಾಲ ಬದಲಾದಂತೆ, ಇಂದಿನ ಅತ್ಯಾಧುನಿಕ ವಿದೇಶೀ ಸಂಸ್ಕೃತಿಯ ಅಬ್ಬರದ ದಾಳಿಯಲ್ಲಿ ನಮ್ಮ ಅವಿಭಕ್ತ ಕುಟುಂಬಗಳು ನುಚ್ಚು ನೂರಾದವು. ಅವಿಭಕ್ತ ಕುಟುಂಬದ ಒಗ್ಗಟ್ಟು ಒಡೆದುಹೋದ ಹಾಲಿನ ಗಡಿಗಿಯಾಯಿತು. ಗಂಡ-ಹೆಂಡತಿ ತಮ್ಮ ಮಕ್ಕಳೊಂದಿಗೆ ಆಧುನಿಕ ಬಂಗಲೆಗಳಿಗೆ ಹೋಗಿ ಪ್ರತ್ಯೇಕವಾಗಿ ವಾಸಿಸತೊಡಗಿದರು. ತಮ್ಮ ವೃದ್ಧರನ್ನು, ವೃದ್ಧಾಶ್ರಮಗಳಿಗೆ ಅಟ್ಟುವ ಕೆಟ್ಟ ಸಂಪ್ರದಾಯ ಬಂತು. ಸಾಯುವ ದಿನವನ್ನು ಕಾಯುತ್ತ ಕಂಬನಿಗೆರೆಯುವ ಈ ವೃದ್ಧರ ಅವಸ್ಥೆಗೆ ಅವರೇ ಹೆತ್ತು-ಹೊತ್ತ ಮಕ್ಕಳೇ ಕಾರಣವಾಗಿರುವುದು ದೊಡ್ಡ ದುರಂತ. ಇಂದು ನಮ್ಮ ಸಾಮಾಜಿಕ ಸಾಂಸ್ಕೃತಿಕ -ಧಾರ್ಮಿಕ ಜೀವನದ ಜಗುಳಿಗಳಲ್ಲಿ ವೃದ್ಧರಿಗೆ ಪ್ರೀತಿಯ ಜೋಕಾಳಿ ಜೀಕಲೇಬೇಕು.

ಇನ್ನು ಕೆಲವರು ವೃದ್ಧರು ತಮ್ಮ ವೃದ್ಧತ್ವಕ್ಕೆ ತಾವೇ ಅಂಜಿ ಹರೆಯದವರಾಗಿ ಕಾಣಲು ಕೂದಲಿಗೆ ಕಪ್ಪು ಲೇಪಿಸಿಕೊಳ್ಳುವುದನ್ನು ಕಾಣುತ್ತೇವೆ. ಇದು ಬೇಡ. ಬೆಳ್ಳಿಗೂದಲು ಬೆಳ್ಳಿಬೆಳಕಿನ ಚಿಂತನೆಗಳ ಚಂದದ ತೋರಣ. ಪ್ರೀತಿಯ ಹಿರಿಯರೇ.... ನಿಮ್ಮ ಹಿರಿಯ ವಯಸ್ಸು ನಮಗೆಲ್ಲರಿಗೂ ಅರುಹಿನ ದಾರಿದೀಪ! ನಾವು ನಿಮ್ಮ ಆದರ್ಶಗಳ ಕುಡಿದೀಪ!!.

ಈ ನಿಟ್ಟಿನಲ್ಲಿ ಯೌವನ ವಿಶ್ವದ ಸೇವೆಗೆ ಸರ್ವೋತ್ಕೃಷ್ಟವಾದರೆ.... ನಮ್ಮ ಗ್ರಾಹಸ್ತ್ಯ ಸಮಾಜದ ಸೇವೆಗೆ ಸರ್ವೋನ್ನತವಾದರೆ... ಮುಪ್ಪು ಈಶ್ವರಾನುಭೂತಿಯ ವಿಶ್ವಕಲ್ಯಾಣದ ಮಹಾಪರಿವರ್ತನೆಯ ಮಹಾಮಂತ್ರ ದೈವತ್ವದ ದೀಪಗೋಪುರ!!.

ಮುಪ್ಪು ನಂದಾದೀಪ. ಅರುಹು ನಿರಂತರ ಅರಳುವ ಅಮರಪುಷ್ಪ. ಇರುಹು-ಅರುಹು ಒಂದಾಗುವುದೇ ಜ್ಯೋತಿರ್ಮಾನಸ ಯಾತ್ರೆಯ ಕುರುಹು. ಸಹಜ ಶಿವಾನುಭವವೇ ಈ ಮಹಾನ್ ಪ್ರಕ್ರಿಯೆಗೆ ತಾರಕ-ಪೂರಕ-ಪೋಷಕ! ಜಡದಿಂದ ಜಂಗಮಕ್ಕೆ, ಶಿಲೆಯಿಂದ ಶಿವಪ್ರಜ್ಞೆಗೆ ವಿಕಾಸವಾಗುವ ಸಹಜ ಕಾಲವೇ ವಾರ್ಧಕ್ಯ! ಮುಪ್ಪು ಅಂದರೆ ಸಾಯುವುದಲ್ಲ, ಪುನರ್ನಿರ್ಮಾಣ! ಮುಪ್ಪಿನ ಅರ್ಥ ಅರಿತ ಆತ್ಮಜ್ಞಾನಿಗೆ 'ಮರಣವೇ ಮಹಾನವಮಿ!'.... ಸಾವು 'ಸೋಬಾನ'!

ಬನ್ನಿ.... ನಮ್ಮ ಮನೆಯ ಜಗುಲಿಯ ಮೇಲೆ ನಮ್ಮ ಅಜ್ಜ-ಅಜ್ಜಿಯರು ಇರಲಿ! ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವೃದ್ಧರಿಗೆ ಭದ್ರತೆಯೊಂದಿಗೆ ಮನ್ನಣೆಯ ಮಣೆ ದೊರೆಯಲಿ. ಅವರು ಬೆಳಕು ಪಡೆಯಲಿ, ಭುವನಕ್ಕೆ ಬೆಳಕು ಸುರಿಸಲಿ!!.

❋

## ಸೋಮೇಶ್ವರ ಶತಕ

*ತವೆ ಸಾಪತ್ನಿಯರಾಟ ಸಾಲ ಮಧುಪಾನಂ*
*ಬೇಟದಾ ಜಾರಿಣೀ ।*
*ನಿವಹಂ ಮಾಡುವ ಮಾಟಮಂತುಂಟಮಿತಂ*
*ಮೃಷ್ಟಾನ್ನಮೆಂದೂಟ ದ್ಯೂ ॥*
*ತವನಾಡುತ್ತಿಹ ಪೋಟ ಸೂಳೆಯರೊಳೊಲ್ದಿರ್ಪಾಟ*
*ಮಿಂತೆಲ್ಲ ಮುಂ ।*
*ಸವಿಯಾಗಂತ್ಯದಿ ಕಷ್ಟವೈ ಹರಹರಾ ಶ್ರೀ*
*ಚೆನ್ನಸೋಮೇಶ್ವರಾ ॥*

ಸವತಿಯರು ಗಂಡನಲ್ಲಿ ತೋರಿಸುವ ಆಟಪಾಟಗಳು, ಸಾಲ ಮಾಡುವುದು, ಮದ್ಯಪಾನ ಮಾಡುವುದು, ಜಾರಸ್ತ್ರೀಯರು ತಮ್ಮನ್ನು ಮೋಹಿಸುವಂತೆ ತೋರಿಸುವ ಬೆಡಗು, ಮೃಷ್ಟಾನ್ನವು ಸಿಕ್ಕಿತೆಂದು ಮಿತಿ ಮೀರಿ ಮಾಡುವ ಊಟ, ಜೂಜಾಡುವ ಪುಂಡರಲ್ಲಿಯೂ ಸೂಳೆಯರಲ್ಲಿಯೂ ವಿನೋದ ಪಡುವುದು-ಇವು ಮೊದಮೊದಲು ಸುಖಕರವಾಗಿ ಕಂಡುಬಂದರೂ ಕೊನೆಗೆ ಕಷ್ಟವನ್ನುಂಟುಮಾಡುವುವು.





## ಮಾರಿ-ಮಹಾಮಾರಿ

-ಈರಯ್ಯ ಕಿಲ್ಲೇದಾರ 'ಈನಿಂಕಿ' ಕವಿತಾ ಪ್ರಕಾಶನ ಗುಡಿಕಟ್ಟಿ, ಅಂಚೆ. ಕ್ರ. ೫೬೧೧೦೪. ಬೆಳಗಾವಿ ಜಿಲ್ಲೆ.

'ಸತ್ತವರ ಬಾಯಿಗೆ ಅಂಬಿ ಕಟ್ಟುತಿದ್ದರು. ಇದೇನ ಎಪ್ಪಾ ಜೀವ ಇದ್ದಾವರು ಬಾಯಿ ಮೂಗಿಗೆ ಅಂಟಿ ಕಟಿಗೊಂಡೀದಾರು'. ಆಶ್ಚರ್ಯದಿಂದ ನನ್ನವ್ವ ದೂರದರ್ಶನದಲ್ಲಿ ನೋಡಿದ ದೃಶ್ಯ ಕುರಿತು ಕೇಳುತ್ತಾಳೆ. ಮೂಗು ಬಾಯಿಗೆ ಮುಖ ಕವಚ ಹಾಕಿಕೊಂಡರೆ ಹಂದಿಜ್ವರದ ಸೋಂಕು ಗಾಳಿಯಲ್ಲಿ ಮತ್ತೊಬ್ಬರಿಗೆ ಹರಡುವುದಿಲ್ಲ. ದೊಡ್ಡ ದೊಡ್ಡ ನಗರಗಳಲ್ಲಿ ಲಕ್ಷ ಲಕ್ಷ ಮುಖಕವಚಗಳು ಪ್ರತಿದಿನ ಮಾರಾಟವಾಗುತ್ತಿವೆ. ಈ ಮುಖ ಕವಚಗಳನ್ನು ಎಲ್ಲಿ ಬೇಕೆಂದಲ್ಲಿ ಬಿಸಾಕುವಂತಿಲ್ಲ. ಒಂದು ವೇಳೆ ಬಿಸಾಕಿದರೆ ಗಾಳಿಯಲ್ಲಿ ವೈರಸ್‌ಗಳು ಹಾರಿ ಹೋಗಿ ರೋಗ ಹಬ್ಬಿಸುತ್ತವೆ. ಮಾರಿ ಬ್ಯಾನಿ, ದುರಗವ್ವನ ಬ್ಯಾನಿ, ಮಲೇರಿಯಾ, ಕಾಲರಾ, ಸಿಡುಬು ಮತ್ತು ಪ್ಲೇಗು ಮೊದಲಾದ ರೋಗಗಳ ಬಗ್ಗೆ ಕೇಳಿ ಪರಿಚಯ ಇರುವ ಹಳೆಯ ತಲೆಮಾರಿನ ಜನರು ಆಶ್ಚರ್ಯಪಡುತ್ತಾರೆ. ಯಾಕೆಂದರೆ ಇಂದಿನ ರೋಗಗಳ ಹೆಸರುಗಳು ಉಚ್ಛರಿಸಲು ಬರುವುದಿಲ್ಲ. ವೈದ್ಯರೂ ತಬ್ಬಿಬ್ಬುಗೊಳ್ಳುತ್ತಿದ್ದಾರೆ. ಯಾಕೆಂದರೆ ಚಿಕಿತ್ಸೆ ಮಾಡುವಾಗ ಹಂದಿಜ್ವರ ಅವರನ್ನು ಕಾಡುತ್ತದೆ.

ಮೆಕ್ಸಿಕೋದಲ್ಲಿ ಮೊಟ್ಟ ಮೊದಲು ಹಂದಿಜ್ವರ ಕಾಣಿಸಿಕೊಂಡಿತು. ಬ್ರೆಜಿಲ್, ಮೆಕ್ಸಿಕೋ, ಥಾಯ್‌ಲ್ಯಾಂಡ್, ಚೀನಾ ಹೀಗೆ ಹಲವು ಹತ್ತು ದೇಶಗಳಲ್ಲಿ ಹಂದಿಜ್ವರ ಮನೆಮಾತಾಗಿತ್ತು. ಅದೀಗ ನಮ್ಮ ದೇಶದಲ್ಲೂ ಹರಡಿ ಹಬ್ಬುತ್ತಿದೆ. ಪಟ್ಟಣಗಳಿಂದ, ಹಳ್ಳಿಯ ಕಡೆಗೂ ತನ್ನ ಕುಡಿ ಚಾಚುತ್ತಿದೆ. ವಿಷಮಜ್ವರ, ಹಕ್ಕಿ ಜ್ವರ, ಡೇಂಗೀ ಜ್ವರಗಳ ಸಾಲಿಗೆ ಹಂದಿಜ್ವರವೂ ಸೇರಿ ಜನರನ್ನು ಬಲಿ ತೆಗೆದುಕೊಳ್ಳುತ್ತಿದೆ. ಏಡ್ಸ್‌ನಂತಹ ರೋಗಗಳು ಮೊದಲಿನ ಪಾಂಡು ರೋಗದ ಬದಲಾಗಿ, ಹೊಸ ಹೆಸರಿನಲ್ಲಿ ನವೀಕರಣಗೊಂಡಿವೆ. ಚಿಕೂನ್ ಗುನ್ಯಾದಂತಹ ಅತ್ಯಂತ ನೋವಿನ ರೋಗಕ್ಕೆ ಪರಿಹಾರ ಕಂಡು ಕೊಳ್ಳಲಾಗಿಲ್ಲ. ಸ್ವಾತಂತ್ರ್ಯ ಬಂದಾಗಿನಿಂದಲೂ ಮಲೇರಿಯಾ ನಿರ್ಮೂಲನೆ ಮಾಡಲಾಗಿಲ್ಲ. ಹೀಗಿದ್ದೂ ಹಂದಿಜ್ವರ ಜನರಲ್ಲಿ ಆತಂಕ ಮೂಡಿಸಿದೆ. ಪ್ರತಿದಿನವೂ ಈ ಮಹಾಮಾರಿ ಬಲಿ ತೆಗೆದುಕೊಂಡ ಅಂಕಿ ಸಂಖ್ಯೆಗಳು ಮತ್ತಷ್ಟು ಜನರ ಬಲಿಗಾಗಿ ಕಾದು ಕುಳಿತು ಹೆಚ್ಚಳವಾಗುವ ಹಂತ ತಲುಪಿದೆ.

ಇದು ಜಾಗತೀಕರಣ ಬೀಸಿದ ಕಾಲ. ಮುಕ್ತ ವಹಿವಾಟಿನ ಕಾಲ. ಆಹಾರ ಧಾನ್ಯ, ಬೇಳೆ ಕಾಳು, ಖಾದ್ಯ ತೈಲ, ಮೊದಲಾದ ವಸ್ತುಗಳ ಜೊತೆಗೆ ಹಂದಿ ಜ್ವರವು ಸಹಜವಾಗಿ ಆಮದಾಗಿದೆ. ಹಂದಿ ಜ್ವರ ಸಾಮಾನ್ಯ ಪರೀಕ್ಷೆಯಿಂದ ಸಾಧ್ಯವಿಲ್ಲ. ಅಂತಿಂತಹ ಯಂತ್ರಗಳು ಕಾರ್ಯ ನಿರ್ವಹಿಸಲು ಸಾಧ್ಯವಿಲ್ಲ. ರೋಗ ಪತ್ತೆ ದುಬಾರಿ ವೆಚ್ಚದ್ದು. ಚಿಕಿತ್ಸೆಯಂತೂ ಇನ್ನಷ್ಟು ದುಬಾರಿ. ರೋಗ ಪತ್ತೆ ಹಚ್ಚುವ ಯಂತ್ರಗಳು ನಮ್ಮ ದೇಶದಲ್ಲಿ ಇಲ್ಲ. ಲಸಿಕೆಗಳು ಮಾತ್ರೆಗಳು, ರೋಗ ಪತ್ತೆ ಯಂತ್ರೋಪಕರಣಗಳನ್ನು ವಿದೇಶಗಳಿಂದ ತರಿಸಿಕೊಳ್ಳಬೇಕು. ಹಂದಿ ಜ್ವರದ ಸೋಂಕು, ರೋಗ ಪತ್ತೆ ಯಂತ್ರೋಪಕರಣಗಳನ್ನು ವಿದೇಶಗಳಿಂದ ತರಿಸಿಕೊಳ್ಳಬೇಕು. ಹಂದಿ ಜ್ವರದ ಸೋಂಕು ಪತ್ತೆ ಮಾಡಲು ಒಂದು ಪ್ರಕರಣಕ್ಕೆ ೫ ಸಾವಿರ ಖರ್ಚಾಗಬಹುದು. ಹಂದಿಜ್ವರ ತಗುಲಿದ ಬಗ್ಗೆ ದೃಢ ಪಡಿಸಲು ೧೦ ಸಾವಿರ ಬೇಕು. ಇನ್ನು ಚಿಕಿತ್ಸೆಗೆ ಎಷ್ಟೋ ಏನೋ. ರೋಗಿ ಬದುಕಿ ಉಳಿವನೋ ಇಲ್ಲವೋ ತಿಳಿಯದು. ರೋಗ ತಪಾಸಣಾ ಯಂತ್ರದ ಬೆಲೆ ಒಂದು ಕೋಟಿ ರೂಪಾಯಿ. ರೋಗ ಪತ್ತೆ ಮಾಡುವ ಕಿಟನ್ ಬೆಲೆ ಲಕ್ಷ ರೂಪಾಯಿ! ಅಬ್ಬಬ್ಬಾ ಶ್ರೀಮಂತ ರೋಗಕ್ಕೆ ಶ್ರೀಮಂತ ಚಿಕಿತ್ಸೆ. ದೇಶ ವಿದೇಶಗಳಿಗೆ ವಿಮಾನದಲ್ಲಿ ಹಾರಾಡುವವರೇ ಈ ರೋಗ ಹರಡುವವರಾಗಿದ್ದಾರೆ. ಬೇರೆ ದೇಶದವರು ನಮ್ಮ ದೇಶಕ್ಕೆ ಬಂದ ಕೂಡಲೇ ತಾವು ಈ ರೋಗದಿಂದ ಮುಕ್ತ ಎಂದು ಸಾಬೀತು ಪಡಿಸಬೇಕು. ಅದೇ ರೀತಿ ಬೇರೆ ದೇಶಗಳಿಗೆ ಹೋದವರೂ ಕೂಡ ಸಾಬೀತು ಪಡಿಸಬೇಕು.

**ರೋಗ ಪರೀಕ್ಷೆಯಲ್ಲಿ ರೋಗಿ ಪಾಸಾಗಲಾರ :** ಯಾವುದೇ ಸಾಮಾನ್ಯ ಕಾಯಿಲೆ ಬಂದರೆ ಚಿಕಿತ್ಸೆ ಪಡೆಯಲು ಆಸ್ಪತ್ರೆಗೆ ಜನ ಹೋಗುತ್ತಾರೆ. ವೈದ್ಯರು ಒಮ್ಮೆಲೆ ಇಂಜೆಕ್ಷನ್ ಇಲ್ಲವೆ ಔಷಧೋಪಚಾರ ಮಾಡಲಾರರು. ಹಲವಾರು ಪರೀಕ್ಷೆಗಳ ಆಧಾರದ ಮೇಲೆ ಔಷಧೋಪಚಾರ ಮಾಡುವರು. ರಕ್ತ, ಮಲ, ಮೂತ್ರ, ಶುಗರ್, ಬಿ.ಪಿ., ಕಫ ಹೀಗೆ ಪರೀಕ್ಷೆಗಳಾಗಬೇಕು. ಅದ್ಯಾವುದರಲ್ಲೂ ದೋಷ ಇಲ್ಲದೆ ರೋಗಿ ಪಾಸಾದರೆ



## ಆರೋಗ್ಯ



ಎಕ್ಸರೇ ಸ್ಕ್ಯಾನಿಂಗ್ ಇತ್ಯಾದಿ ಪರೀಕ್ಷೆಗೆ ತಯಾರಾಗಬೇಕು. ಕೊನೆಗೆ ಒಂದಾದರೂ ದೋಷ ಅಥವಾ ರೋಗದ ಲಕ್ಷಣ ಕಂಡು ಬರದೆ ಇರದು. ಆಗ ಉಪಚಾರ ಸುರು. ಅಲೋಪತಿ ಔಷಧಿಗಳು ಹೆಚ್ಚಾಗಿ ಎಂಟಿಬಯೋಟಿಕ್ ಆಗಿವೆ. ಜೀವಾಣುಗಳ ನಾಶಕ್ಕೆ ಕಾರಣವಾಗಿ, ರೋಗ ತಾತ್ಕಾಲಿಕವಾಗಿ ಕಡಿಮೆ ಎನಿಸಿದರೂ ಅಡ್ಡ ಪರಿಣಾಮ ಬೀರಿದ ಔಷಧಿಗಳು ಮತ್ತೊಂದು ರೋಗದ ಬೀಜ ಬಿತ್ತುತ್ತವೆ. ಮತ್ತೆ ಆಸ್ಪತ್ರೆ ವೈದ್ಯರು, ಎಂಟಿಬಯೋಟಿಕ್ ಔಷಧಿ– ಬಿಲ್ ಇದ್ದೇ ಇರುತ್ತದೆ. ಶಸ್ತ್ರಚಿಕಿತ್ಸೆ ಬಾಯ್‌ಪಾಸ್ ಸರ್ಜರಿಗಳು ಮುಂದುವರೆಯುತ್ತವೆ. ಸಕ್ಕರೆ ಖಾಯಿಲೆ ಹಾಗೂ ಹೃದಯ ರೋಗಗಳಿಗೆ ರೋಗಿ ಸಾಯುವ ತನಕ ಔಷಧಿ ತೆಗೆದುಕೊಳ್ಳಲೇಬೇಕು. ತಾಯಿ ಗರ್ಭದಲ್ಲೇ ಔಷಧೋಪಚಾರ ಸುರುವಿಟ್ಟು ಭೂತಾಯಿ ಮಡಿಲಿಗೆ ಸೇರುವ ತನಕ ಅನಿವಾರ್ಯ ಎನಿಸಿದೆ. ನೂರಕ್ಕೆ ನೂರು ಜನರೂ ರೋಗಿಗಳೇ! ವೈದ್ಯರ ಅಗತ್ಯ ಎಲ್ಲ ಜನರಿಗೂ ಇದ್ದೇ ಇದೆ.

ಒಂದೊಂದು ರೋಗಕ್ಕೂ ಹಲವು ಹತ್ತು ಕಂಪನಿಗಳ ಔಷಧಿಗಳು ಮನುಷ್ಯನ ಒಂದೊಂದು ಅಂಗ ಉಪಅಂಗ ಗಳಿಗೂ ಒಬ್ಬೊಬ್ಬ ಸ್ಪೆಷಾಲಿಟಿ ಡಾಕ್ಟರುಗಳು. ಜನಸಂಖ್ಯೆ ಹೆಚ್ಚಾದ ಹಾಗೆ ಡಾಕ್ಟರುಗಳು ಔಷಧಿಗಳು, ಮಲ್ಟಿಸ್ಪೆಷಾಲಿಟಿ ಆಸ್ಪತ್ರೆಗಳು ಹೆಚ್ಚಾಗುತ್ತಲೇ ಇವೆ. ಅದೇ ರೀತಿ ರೋಗಗಳೂ ಹೆಚ್ಚಾಗುತ್ತಿವೆ. ಹುಟ್ಟಿದವನಿಗೆ ಸಾವು ನಿಶ್ಚಿತ. ಸಾವನ್ನು ಯಾವ ವೈದ್ಯನೂ ತಪ್ಪಿಸಲಾರ. ಇರುವವರೆಗೆ ಮನುಷ್ಯ ಆರೋಗ್ಯವಂತನಾಗಿ ಬದುಕಬೇಕೆಂದು ಆಶಿಸುವುದು ಸ್ವಾಭಾವಿಕ. ಎಲ್ಲರಿಗೂ ಆರೋಗ್ಯ ಎಂಬ ಘೋಷ ವಾಕ್ಯಗಳಾದ ಯಶಸ್ವಿನಿ, ಆರೋಗ್ಯ ಕವಚದಂತಹ ಯೋಜನೆಗಳೂ ಇವೆ. ಪಲ್ಸ್ ಪೋಲಿಯೋ ಹನಿ ಹಾಕಿ ಆರು ಮಾರಕ ರೋಗಗಳು ಬಾರದಂರೆ ತಡೆಯುತ್ತವೆ ಎಂದು ಹೇಳಲಾಗುತ್ತಿದೆ. ಏನೆಲ್ಲಾ ಹೊಸ ಹೊಸ ತಂತ್ರ ಜ್ಞಾನ, ವೈದ್ಯಕೀಯ ರಂಗದ ಸಂಶೋಧನೆಗಳು ಬಂದರೂ ರೋಗಗಳು ಹೆಚ್ಚಾಗುತ್ತಿವೆ. ಹೀಗೇಕೆ? ಎಂಬ ಪ್ರಶ್ನೆಗೆ ನಿರುತ್ತರ. ಪ್ರಾಚೀನ ಕಾಲದಲ್ಲಿ ರೋಗಗಳು ಇದ್ದಿಲ್ಲ ಎಂದಿಲ್ಲ. ಆಗಲೂ ರೋಗಗಳು ಇದ್ದವು. ವಿಜ್ಞಾನ ಇಷ್ಟು ಮುಂದುವರಿದಿರಲಿಲ್ಲ. ಹೈಟೆಕ್ ಡಾಕ್ಟರು ಔಷಧಿ ಮತ್ತು ಆಸ್ಪತ್ರೆಗಳೂ ಇರಲಿಲ್ಲ. ಆದರೂ ಅವರಿಗಿದ್ದ ಆರೋಗ್ಯ ಭಾಗ್ಯ ನಮಗಿಲ್ಲ. ನಮ್ಮ ಮಕ್ಕಳಿಗಂತೂ ದೂರದ ಮಾತು. ಅಲ್ಲೊಬ್ಬ ಇಲ್ಲೊಬ್ಬ ನಾಟಿ ವೈದ್ಯರಿದ್ದರು. ನಾರು, ಬೇರು, ಎಲೆ, ಕಾಯಿ , ಹಣ್ಣು ಬೀಜ ತಿನ್ನಲು ಹೇಳುತ್ತಿದ್ದರು. ವನಸ್ಪತಿ ಔಷಧಿಗಳು ಅಷ್ಟೇ ಪರಿಣಾಮಕಾರಿ ಆಗಿದ್ದವು. ಈಗಲೂ ಕೂಡಾ ! ನೆಲಬೇವು, ಅಮೃತಬಳ್ಳಿ ಎಲೆ ಭೀಕರ ರೋಗಗಳನ್ನು ಗುಣಪಡಿಸಬಲ್ಲವು.

ರೋಗಿಯ ನಾಡಿ ಹಿಡಿದು ರೋಗದ ಲಕ್ಷಣ ಕಂಡು ಹಿಡಿಯಬಲ್ಲ ನಾಟಿ ವೈದ್ಯರಿದ್ದರು. ರೋಗಿಯ ಮುಖ ನೋಡಿದರೆ ಸಾಕು ಆತನಿಗೆ ಇಂಥಹ ರೋಗ ಇದೆ ಎಂದು ಹೇಳಬಲ್ಲವರಾಗಿದ್ದರು. ನಾಲಿಗೆಯಿಂದ ನಾಲಿಗೆಗೆ ವೈದ್ಯಕೀಯ ಜ್ಞಾನ ವರ್ಗಾವಣೆಗೊಂಡು ತಲೆಮಾರುಗಳ ತನಕ ಉಳಿದುಕೊಂಡು ಬಂದಿದೆ. ಅವರೆಂದೂ ತಾವು ಕೊಟ್ಟ ಔಷಧಿಗಳಿಗೆ ಹಣ ಪಡೆಯುತ್ತಿರಲಿಲ್ಲ. ರೋಗಿ ಗುಣಮುಖನಾದರೆ ಧನ್ಯತೆಯ ಭಾವ ಅವರಲ್ಲಿ ಮೂಡುತ್ತಿತ್ತು. ಏನಾದರೂ ಪ್ರತಿಯಾಗಿ ಹಣ, ಧಾನ್ಯ ಪಡೆದು ಔಷಧಿ ಕೊಟ್ಟರೆ ಅದು ತನ್ನ ಪರಿಣಾಮ ಕಳೆದುಕೊಳ್ಳುವುದೆಂಬ ಸಂಸ್ಕೃತಿ ಹಿಂದೆ ಇತ್ತು. ಇಂದಿನ ವೈದ್ಯಲೋಕ ಕಂಡರೆ ಭಯವಾಗುತ್ತದೆ. ಊಟ ಬಲ್ಲವನಿಗೆ ರೋಗವಿಲ್ಲ ಎಂಬ ಮಾತಿನಂತೆ ಪ್ರತಿ ವ್ಯಕ್ತಿಯಲ್ಲೂ ರೋಗ ನಿರೋಧಕ ಶಕ್ತಿ ಇಂದಿನ ಅಲೋಪತಿ ಔಷಧಿಗಳಿಂದಾಗಿ ನಾಶವಾಗಿದೆ. ಬೆವರು ಸುರಿಸಿ ದುಡಿವ ರೈತ ಕೃಷಿ ಕೂಲಿಕಾರರಿಗೆ ಬಹುತೇಕ ರೋಗಗಳ ಭಯವಿಲ್ಲ. ಆದರೂ ಚಿಕೂನ್ ಗುನ್ಯಾದಂತಹ ರೋಗ ಊರಿಗೂರೇ ನರಳುವಂತೆ ಮಾಡಿದ್ದು ಅಂತಹ ರೋಗಕ್ಕೆ ಪರಿಹಾರ ಇಲ್ಲದೆ ಹಂದಿ ಜ್ವರಕ್ಕೆ ಪರಿಹಾರ ಹುಡುಕಲು ಹೊರಟಿರುವುದು ಸಮಾಧಾನ ಪಡುವ ಸಂಗತಿಯಲ್ಲ.

❋

### ಶ್ರೀವಾಣಿ

ಮನವನ್ನು ಹಿಡಿತದಲ್ಲಿಟ್ಟವನೇ ಮಹಂತ. ಮನಸ್ಸಿನ ವರ್ತನೆ ಬಹಿರ್ಮುಖವಾಗಿ ಸಂಚರಿಸುವುದನ್ನು ತಡೆ ಹಿಡಿದು ಅಂತರಂಗದಲ್ಲಿ ಅಡಗಿರುವ ಸುಪ್ತ ಚೈತನ್ಯವನ್ನು ಅರಿಯುವುದರಲ್ಲಿ ಮಗ್ನಗೊಳಿಸಿದಾಗ ಮನದ ಮುಂದಣ ಮಾಯೆ ತೊಲಗಿ ಜ್ಞಾನ ಸ್ಫುರಿಸುತ್ತದೆ. ಆಗ ನಿಜೈಕ್ಯ ಜ್ಞಾನಿಯೆನಿಸುತ್ತಾನೆ.





## ಸಸ್ಯ ಸಂಜೀವಿನಿ



### ಉಮ್ಮತ್ತಿ ಗಿಡ

-ಪಂಡಿತ್ ಹೆಚ್. ಹನುಮಂತರಾಯ

ಉಮ್ಮತ್ತಿಗೆ ಮದಗುಣಿಕೆ, ದತ್ತೂರ, ಕನಕ ಎಂಬ ಹೆಸರುಗಳು ರೂಢಿಯಲ್ಲಿವೆ. ದತ್ತೂರವನ್ನು ಉಮ್ಮತ್ತಿಯೊಂದಿಗೆ ಆಯುರ್ವೇದದಲ್ಲಿ ಪರ್ಯಾಯ ಪದವಾಗಿ ಬಳಸಿರುವುದು ಕಾಣಬಹುದು.

ದತ್ತೂರ ಗಿಡವು ಸುಮಾರು ಒಂದರಿಂದ ಎರಡು ಅಡಿ ಎತ್ತರ ಬೆಳೆಯುವಂತಹುದು. ಇದರ ಎಲೆ ಕೊಂಚ ಉದ್ದ ಇದ್ದು ಮುಳ್ಳುಗಳಿಂದ ಕೂಡಿರುತ್ತದೆ. ಇದರ ಕಾಯಿಯ ಮೇಲೆಯೂ ತೀಕ್ಷ್ಣವಾದ ಮುಳ್ಳುಗಳಿರುತ್ತವೆ. ಇದರ ಹೂ ಹಳದಿ ಬಣ್ಣದಿಂದ ಕೂಡಿರುತ್ತದೆ. ಇದರ ರಸ ಸಹ ಹಳದಿಯಲ್ಲಿರುತ್ತದೆ. ಒಣಗಿದ ಇದರ ಕಾಯನ್ನು ಅಲ್ಲಾಡಿಸಿದರೆ ಲೊಳಲೊಳ ಶಬ್ದ ಬರುತ್ತದೆ. ಇದರ ಪಂಚಾಂಗದಿಂದ ಚರ್ಮದ ಕಾಯಿಲೆಗೆ ಔಷಧಿ ಮಾಡುತ್ತಾರೆ. ಸಂಸ್ಕೃತದಲ್ಲಿ ಇದಕ್ಕೆ ಸ್ವರ್ಣಕ್ಷೀರಿ ಎಂದೇ ಹೆಸರು. ಗ್ರಾಮೀಣ ಜನರು ಇದನ್ನು ದತ್ತೂರ ಎಂದು ಕರೆಯುತ್ತಾರೆ. ಮಳೆಗಾಲದಲ್ಲಿ ಬೆಳೆದು ಬೇಸಿಗೆಯಲ್ಲಿ ಒಣಗುತ್ತದೆ.

ಎರಡನೆಯದು ಉಮ್ಮತ್ತಿ ಗಿಡ. ಇದರ ಎಲೆ ಅಗಲ. ಹೂವು ಓಲಗದ ಆಕಾರ. ಕಾಯಿ ದಪ್ಪಗೆ ಗುಂಡಗೆ ಚಂಡಿನ ಗಾತ್ರ. ಇದರ ಮೇಲ್ಮೈ ಮೊಂಡಾದ ಮುಳ್ಳುಗಳು, ಒಣಗಿದ ಮೇಲೆ ಇದರ ಬೀಜ ಕಪ್ಪು. ಇದನ್ನು ಗ್ರಾಮಾಂತರದ ಜನ ಉಮ್ಮತ್ತಿ ಎಂದು ಕರೆಯುತ್ತಾರೆ. ಇದರಲ್ಲಿ ಸಣ್ಣ ಗಾತ್ರದ ಕಾಯಿಗಳುಳ್ಳ ಒಂದು ಅಡಿ ಎತ್ತರ ಬೆಳೆಯುವ ಎರಡನೆ ಜಾತಿಯಿರುತ್ತದೆ. ಇದನ್ನು ಮರುಳುಮ್ಮತ್ತಿ ಎಂದು ಕರೆಯುತ್ತಾರೆ. ದೊಡ್ಡ ಉಮ್ಮತ್ತಿಯನ್ನು ಕೆಮ್ಮು, ದಮ್ಮು, ವಾಯು, ಕಿವಿನೋವು, ನಾಡಿವ್ರಣ, ಕ್ರಿಮಿದಂತ ಮುಂತಾದ ರೋಗಗಳಲ್ಲಿ ಉಪಯೋಗಿಸಲಾಗುತ್ತದೆ.

ವಾತರೋಗಕ್ಕೆ ಇದರಿಂದ ತಯಾರಿಸುವ ತೈಲದ ಬಗ್ಗೆ ಪರಿಚಯಿಸುತ್ತೇನೆ. ಮನುಷ್ಯರಿಗೆ ವಯಸ್ಸಾದಂತೆಲ್ಲ ಕೀಲು ನೋವು, ನಡುನೋವು, ಸೊಂಟನೋವು, ಮಾಂಸಖಂಡಗಳ ನೋವುಗಳು ಕಾಣುಸಿಕೊಳ್ಳುವುದು ರೂಢಿ. ಈ ವಾತ ರೋಗಕ್ಕೆ ಮನೆಯಲ್ಲೇ ಮಾಡಿಕೊಳ್ಳಬಹುದಾದ ತೈಲ ವನ್ನು ಕೆಳಗೆ ತಿಳಿಸಿರುವಂತೆ ತಯಾರಿಸಿಕೊಳ್ಳಬಹುದು.

ಒಂದು ಲೀಟರು ಉಮ್ಮತಿ ಸೊಪ್ಪಿನ ರಸ + ಒಂದು ಲೀಟರು ಎಳ್ಳೆಣ್ಣೆ + ೨೦ ತೊಲೆ ಅಶ್ವಗಂಧ ಚೂರ್ಣ + ೩೦ ತೊಲೆ ಬಲಮೂಲದ ಚೂರ್ಣ ಇವೆಲ್ಲವನ್ನೂ ಒಟ್ಟು ಮಾಡಿ ಒಲೆಯಮೇಲೆ ಇಟ್ಟು ಸಣ್ಣ ಉರಿಯಿಂದ ಕಾಯಿಸುವುದು. ನೀರಿನ ಪೂರ ಹಿಂಗಿ ತೈಲ ಮಾತ್ರ ಉಳಿದ ಬಳಿಕ ಅದನ್ನು ಶೋಧಿಸಿ ಸಂಗ್ರಹಿಸಿಕೊಳ್ಳಿ.

ಪ್ರತಿದಿನವೂ ತೈಲವನ್ನು ನೋವಿರುವ ಭಾಗಗಳಿಗೆ ಹಚ್ಚಿ ಮೃದುವಾಗಿ ೫ ನಿಮಿಷಗಳ ಕಾಲ ತಿಕ್ಕಬೇಕು. ಹೀಗೆ ದಿನಕ್ಕೆ ಎರಡು ವೇಳೆ ಮಾಡಿದರೆ ವಾಯು ಸಂಬಂಧಿ ನೋವುಗಳು ಬೇಗ ಮಾಯವಾಗಬಲ್ಲವು. ಐದು ತೊಲ ಉಂಡೆ ಕರ್ಪೂರವನ್ನು ಈ ತೈಲದಲ್ಲಿ ಬೆರೆಸಿದರೆ ಗುಣ ಹೆಚ್ಚುತ್ತದೆ.

❋

### ಮೆಂತ್ಯ

ಮೆಂತ್ಯ ದೇಹವನ್ನು ತಂಪಾಗಿಡುತ್ತದೆ. ಜೀರ್ಣ ಶಕ್ತಿಯನ್ನು ಹೆಚ್ಚಿಸುತ್ತದೆ. ಅರ್ಧ ಟೀ ಚಮಚದಷ್ಟು ಮೆಂತ್ಯ ಕಾಳುಗಳನ್ನು ದಿನಕ್ಕೆ ಮೂರು ಸಾರಿ ಸೇವಿಸಿದರೆ ಆಮಶಂಕೆ ಭೇದಿ ನಿಯಂತ್ರಣಕ್ಕೆ ಬರುತ್ತದೆ. ಅಲ್ಸರ್, ಅಜೀರ್ಣ, ಆ್ಯಸಿಡಿಟಿಯಂತಹ ಹೊಟ್ಟೆಯ ತೊಂದರೆಗಳಿಗೆ ಮೆಂತ್ಯಕಾಳಿನ ಕಷಾಯ ಪರಿಣಾಮ ಕಾರಿ. ಮೆಂತ್ಯ ಸೊಪ್ಪಿನ ಪೇಸ್ಟನ್ನು ದಿನಾ ಮಲಗುವ ಮುನ್ನ ಮುಖಕ್ಕೆ ಹಚ್ಚಿಕೊಂಡರೆ ಮೊಡವೆಗಳು, ಸುಕ್ಕುಗಳು ನಿವಾರಿಸಿಕೊಳ್ಳಬಹುದು. ಒಂದು ಚಮಚ ಮೆಂತ್ಯೆವನ್ನು ಗಟ್ಟಿ ಮೊಸರಿನಲ್ಲಿ ಕಲೆಸಿ ಬಾಯಿಗೆ ಹಾಕಿಕೊಂಡು ನುಂಗುವುದರಿಂದ ಭೇದಿಯಾಗುತ್ತಿದ್ದರೆ ನಿಂತು ಬಿಡುತ್ತದೆ. ಕೊಬ್ಬರಿ ಎಣ್ಣೆಗೆ ಮೆಂತ್ಯೆದ ಕಾಳುಗಳನ್ನು ಹಾಕಿ ತಲೆಗೆ ಹಚ್ಚಿಕೊಳ್ಳುತ್ತಾ ಬಂದರೆ ಅಪ್ರಾಪ್ತ ವಯಸ್ಸಿನಲ್ಲಿ ನೆರೆ ಕೂದಲಾಗುವುದನ್ನು ತಡೆಗಟ್ಟಬಹುದು. ಮೆಂತ್ಯೆ ಸೊಪ್ಪಿನ ನಿಯಮಿತವಾದ ಸೇವನೆಯಿಂದ ಅಲ್ಸರ್ ಎಂಬ ಕರುಳಿನ ಹುಣ್ಣನ್ನು ನಿವಾರಿಸಿಕೊಳ್ಳಬಹುದು.

## ಸುಖಜೀವನ

-ಕೆ.ಎನ್. ಸ್ವಾಮಿ, ಮಾಜಿ ತಾ.ಕ.ಸಾ.ಪ. ಅಧ್ಯಕ್ಷರು, ದಾವಣಗೆರೆ.

**ಸು**ಖ ಯಾರಿಗೆ ಬೇಡ ? ಎಲ್ಲರಿಗೂ ಬೇಕು. ದುಃಖ ಮಾತ್ರ ಎಲ್ಲರಿಗೂ ಬೇಡ. ಸುಖ ದುಃಖಗಳು ಒಂದರ ಹಿಂದೆ ಒಂದು ಬಂದೇ ಬರುತ್ತವೆ. ಹಗಲು ರಾತ್ರಿಗಳಿದ್ದಂತೆ, ನೋವು ನಲಿವುಗಳಿದ್ದಂತೆ. ಸುಖದುಃಖಗಳು ಯಾರನ್ನು ಬಿಟ್ಟಿಲ್ಲ, ಬಿಡುವುದೂ ಇಲ್ಲ. ಇದು ಅನುಭವ ವೇದ್ಯ.

ಸುಖವನ್ನು ತಾತ್ಕಾಲಿಕವಾಗಿ ಕೊಡುವ ದುಶ್ಚಟಗಳಿಗೆ ದಾಸರಾದರೆ, ಅದರ ಫಲವನ್ನು ಅನುಭವಿಸಬೇಕಾಗುತ್ತದೆ. ಮಹಾತ್ಮರು ಸುಖ-ದುಃಖಗಳನ್ನು ಸಮಾನವಾಗಿ ಸ್ವೀಕರಿಸುತ್ತಾರೆ. ಆದುದರಿಂದ ಇವರನ್ನು ಸ್ಥಿತಪ್ರಜ್ಞರೆನ್ನುತ್ತಾರೆ.

ವಿದ್ಯಾರ್ಥಿಗಳು ಸುಖಿಗಳಾದರೆ, ಭವಿಷ್ಯದಲ್ಲಿ ದುಃಖವನ್ನು ಅನುಭವಿಸಬೇಕಾಗುತ್ತದೆ. ಅಂದಂದಿನ ಪಾಠಗಳನ್ನು ಅಂದಂತೆ ಓದಿ-ಬರೆದು ಮನನ ಮಾಡಿಕೊಂಡರೆ ಪರೀಕ್ಷೆಗೆ ಹೆದರಬೇಕಾಗಿಲ್ಲ. ಪರೀಕ್ಷೆಗಳು ಹತ್ತಿರವಾಗುತ್ತಿರುವ ಸಂದರ್ಭದಲ್ಲೂ ಹಗಲು ರಾತ್ರಿ ಓದಿದರೂ, ಓದು ಅರ್ಜಿರ್ಣವಾಗುತ್ತದೆ ತಲೆಗೆ ಹತ್ತುವುದಿಲ್ಲ. ನಿಯಮಾನುಸಾರ ಮನಸ್ಸಿಟ್ಟು ಅಭ್ಯಾಸ ಮಾಡಿದರೆ ಅಂಕಗಳಿಸುವುದು ಕಷ್ಟವಾಗುವುದಿಲ್ಲ.

ವಿದ್ಯಾರ್ಥಿಯಾಗಿದ್ದಾಗ ವಿಶ್ವೇಶ್ವರಯ್ಯನವರು ಚಾಪೆ ಮೇಲೆ ಮಲಗುತ್ತಿದ್ದರಂತೆ, ಕೈ ಅವರ ತಲೆ ದಿಂಬಾಗಿರುತ್ತಿತ್ತಂತೆ, ಸುಪ್ಪತ್ತಿಗೆ ಮೇಲೆ ಮಲಗುವವರಿಗೆ ವಿದ್ಯೆ ದೂರವಾಗುತ್ತದೆ.

ಆಂಗ್ಲ ಕವಿ ಸರ್. ಹೆನ್ರಿ ವಾಟನ್, ತನ್ನ 'ಕ್ಯಾರೆಕ್ಟರ್ ಆಫ್ ಎ ಹ್ಯಾಪಿ ಮ್ಯಾನ್' ಕವಿತೆಯಲ್ಲಿ ಸುಖ ಜೀವನದ ಅಂತರಂಗವನ್ನು ಬಹಿರಂಗಗೊಳಿಸಿದ್ದಾರೆ. ಈ ಕವಿತೆಯನ್ನು ಆಚಾರ್ಯ ಬಿಎಂಶ್ರೀಯವರು 'ಸುಖಜೀವನ' ಎಂಬ ಹೆಸರಿನ ಕವಿತೆಯ ಮೂಲಕ ಅನುವಾದ ಮಾಡಿದ್ದಾರೆ. ನಿಜವಾದ ಸುಖ ಅನುಭವಿಸುವುದು ಮನುಷ್ಯರಿಗೆ ಮಾತ್ರ ತಿಳಿದಿದೆ. ಸುಖವ್ಯಕ್ತಿ ಸ್ವತಂತ್ರವಾಗಿ ದುಡಿದು ಬದುಕುತ್ತಾನೆ. ಸದಾ ಎಲ್ಲರಿಗೂ ಒಳಿತು ಬಯಸುತ್ತಾನೆ. ತನ್ನ ನಡೆ ನುಡಿಯಲ್ಲಿ ಅದನ್ನು ತೋರಿಸುತ್ತಾನೆ. ರಾಗಗಳು ಅಂದರೆ ಆಸೆಗಳು ತನ್ನನ್ನು ಆಳದಂತೆ ನೋಡಿಕೊಳ್ಳುತ್ತಾನೆ.

ಸುಖ ಬಯಸುವವರು ಸಾವಿಗೆ ಹೆದರಬಾರದು. ಸುಖಿ ಜೀವವನ್ನು ಸಾವಿಗೆ ಅಣಿಮಾಡಿಕೊಂಡಿರುತ್ತಾನೆ. ಸಾವು ಯಾರಿಗೂ ತಪ್ಪಿದ್ದಲ್ಲ. ಇಂದಲ್ಲ ನಾಳೆ ಬಂದೇ ಬರುತ್ತದೆ. ಅಷ್ಟರಲ್ಲಿ ಬದುಕನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂಬ ಅರಿವು ಅವನಿಗೆ ಇರುತ್ತದೆ.

ದೇವರ ಕರುಣೆ ಇರುವವರೆಗೆ ಬದುಕಬಹುದು. ಅದಕ್ಕಾಗಿ ಅತಿ ವ್ಯಾಮೋಹಿಯಾಗಿ, ಸುಖಗಳಿಗೆ ಅಂಟಿಕೊಳ್ಳಬಾರದು. ಹಿಂದೀ ಸಾಹಿತ್ಯದಲ್ಲಿ ಹಾಲಾವಾದ ಎಂಬ ಒಂದು ಪರಂಪರೆ ಇದೆ. ಅದು ಬದುಕು ಅಶಾಶ್ವತ, ಎಲ್ಲಾ ತರಹದ ಸುಖಗಳನ್ನು ಇರುವಾಗಲೇ ಅನುಭವಿಸು, ಮಜಾ ಮಾಡು ಎನ್ನುತ್ತದೆ. ಇದು ತಾತ್ಕಾಲಿಕ ಸುಖ ನೀಡಬಹುದೇ ಹೊರತು, ಮನ ಶಾಂತಿ ನೀಡುವುದಿಲ್ಲ.

ಸುಖಿವ್ಯಕ್ತಿ ಜನರ ಬಾಯಿಗೆ ಬರುವುದಿಲ್ಲ. ತನ್ನ ಆತ್ಮಸಾಕ್ಷಿಯಂತೆ ನಡೆದುಕೊಳ್ಳುತ್ತಾನೆ. ಶರಣರು ಇದನ್ನೇ 'ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ' ಎನ್ನುತ್ತಾರೆ.

ಸುಖಿಗಳು ಹೊಗಳಿಕೆ ತೆಗಳಿಕೆಗಳಿಗೆ ಮನಸ್ಸು ಕೊಡುವುದಿಲ್ಲ. ಜನರು ಎದ್ದಾಗ ಹೊಗಳುವರು, ಬಿದ್ದಾಗ ಬಗುಳುವರು, ಕೆಲವರು ಮಾಡಬಾರದ್ದನ್ನು ಮಾಡಿ ಹಣಗಳಿಸುತ್ತಾರೆ. ಆದರೆ ಸುಖಿ ಮಾತ್ರ ಧರ್ಮ ಸೂತ್ರ ಹಿಡಿದು ಸಾಗುತ್ತಾನೆ. ಯಾರನ್ನೂ ದ್ವೇಷಿಸುವುದಿಲ್ಲ. ಯಾರನ್ನೂ ನೋಡಿ ಕರುಬುವುದಿಲ್ಲ, ಕೇಡು ಬಯಸುವುದಿಲ್ಲ.

ಸುಖಿಗಳು ದೇವರ ಕೃಪೆ ಬಯಸುತ್ತಾನೆ. ದೇವರ ಮೇಲೆ ನಂಬಿಕೆ ಇಟ್ಟು ವ್ಯವಹರಿಸುತ್ತಾರೆ. ಸುಖಿಗಳಿಗೆ ಸುಖಿಗಳೇ ಗೆಳೆಯರಾಗಿಸುತ್ತಾರೆ. ಇವರು ಸತ್ಸಂಗದಲ್ಲಿ ಕಾಲ ಕಳೆಯುತ್ತಾರೆ. ಇವರನ್ನು ಶ್ರೀಯವರು ಮುಕ್ತಕರು ಎನ್ನುತ್ತಾರೆ. ಇವರಿಗೆ ಏರುವ ಆಸೆ, ಬೀಳುವ ಅಳಕು ಇರುವುದಿಲ್ಲ. ಮಣ್ಣುಗಳಿಗೆ ಮಹತ್ವ ನೀಡುವುದಿಲ್ಲ.

ಸುಖ ಎನ್ನುವುದು ಮನಸ್ಸಿನ ಸಂತೋಷದ ಸ್ಥಿತಿ. ಬೆವರು ಸುರಿಸಿ ಗಳಿಸಿ ಉಣ್ಣುವವರು ನಿಜವಾದ ಸುಖಿಗಳು. ಊಟ ಮಾಡುತ್ತಾ ಬೆವರು ಸುರಿಸುವವರು ಅಲ್ಪಸುಖಿಗಳು, ಸರಳ ಜೀವನವೇ ಸುಖದ ಗುಟ್ಟು, ಎಷ್ಟೇ ಶ್ರೀಮಂತಿಕೆ ಇದ್ದರೂ, ಅಹಂಕಾರಿಗಳಾಗದೆ ಮತ್ತೊಬ್ಬರ ಕಷ್ಟ ಸುಖಗಳಿಗೆ ಸದಾ ಸ್ಪಂದಿಸುವರು. ಕೈಲಾದ ಸದಾ, ಸಹಕಾರವನ್ನು ಅನ್ಯರಿಗೆ ನೀಡುತ್ತಾ ಬದುಕುವವರಿಗೆ ಸುಖ ಹಿಂಬಾಲಿಸುತ್ತದೆ. ಸಮಾಜದಲ್ಲಿ, ನೆರೆಹೊರೆಯಲ್ಲಿ ಗೌರವ ಮೂಡುತ್ತದೆ. ಸಾಲ ಮಾಡಿ ತುಪ್ಪ ತಿಂದು, ಸಾಲ ಕೊಟ್ಟವರಿಗೆ ನಾಮ ಹಾಕುವ ವ್ಯಕ್ತಿಗಳಿಗೆ, ಸಂಸ್ಥೆಗಳಿಗೆ ಸುಖ ಕೇವಲ ಮರೀಚಿಕೆ.

*







## ನಿಸರ್ಗೋಪಚಾರದಲ್ಲಿ ಸ್ನಾನದ ಸ್ಥಾನ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ'
ನಂ. ೨/೨೦೫೮, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

**ಎನಿಮಾ :**

ನೀರಿನ ಬೇರೆಲ್ಲಾ ಉಪಯೋಗಗಳನ್ನೂ ಹೇಳಿ ಎನಿಮಾದ ಬಗ್ಗೆ ಹೇಳದಿದ್ದರೆ ಅದು ಪೂರ್ಣವಾಗುವುದೇ ಇಲ್ಲ.

ನೆಟ್ಟಗರುಳು ದೊಡ್ಡ ಕರುಳಿನ ಕೊನೆಯ ಭಾಗ
ಕೊನೆ ಆದರೇನಂತೆ ? ಅದು ಬಹಳ ಮುಖ್ಯ ಜಾಗ
ಅದನರಿಯೇ ಅದಕೆ ಇಟ್ಟಿರುವರು ಹೆಸರು ಮೂಲ,
ಅದರಲೇನಾದರೂ ಹೆಚ್ಚು ಹೊತ್ತು ನಿಂತರೆ ಮಲ
ಅದೇ ಆಗುವುದು ಎಲ್ಲ ರೋಗಗಳ ಮೂಲ
'ಮಲಬದ್ಧತೆ' ಇದೊಂದು ಮುದುಕರ ಮಂತ್ರ
ಅದನು ದೂರಮಾಡಲು ಉಪಯೋಗಿಸುವರು ಅನೇಕ
ತಂತ್ರ ಕಳೆದುಕೊಳ್ಳಲು ಈ ಬವಣೆ
ಸಾಕು ಎನಿಮಾದ ಕರುಣೆ

ಷಟ್ ಕ್ರಿಯೆಗಳಲ್ಲಿ ಬರುವ ಬಸ್ತಿ ಹಾಗೂ ಎನಿಮಾದ ಎರಡೂ ಹೆಚ್ಚೂ ಕಡಿಮೆ ಒಂದೇ. ಆದರೆ ಆ ಬಸ್ತಿ ಕೊಂಚ ಕ್ಲಿಷ್ಟ, ಅದರಿಂದ ಆ ಜಾಗದಲ್ಲಿ ಎನಿಮಾ ಬಳಸಬಹುದು.

'ಯಾರು ಬಸ್ತಿ ಮಾಡುವರೋ ಅವರಿಗೆ ಮಲಬದ್ಧತೆ ಇರುವುದಿಲ್ಲ' ವಾತ ಮತ್ತು ಇತರ ತೊಂದರೆಗಳಿಂದ ದೂರ, ಜೊತೆಗೆ ಹಸಿವು ಹೆಚ್ಚುವುದು'-ಘೇರಂಡ ಸಂಹಿತಾ.

ಮನುಷ್ಯನ ಅನೇಕ ಪ್ರಕ್ರಿಯೆಗಳು ನಿಸರ್ಗದ ಅನುಕರಣೆ. ಕೊಕ್ಕರೆ ತನ್ನ ಕೊಕ್ಕಿನಿಂದ ನೀರನ್ನು ತೆಗೆದುಕೊಂಡು ಅದನ್ನು ತನ್ನ ಗುದದ್ವಾರದೊಳಕ್ಕೆ ಬಿಡುತ್ತದೆ. ಇದನ್ನು ನೋಡಿದ ಮನುಷ್ಯ ಬಸ್ತಿಗೆ ಅಸ್ತಿಭಾರ ಹಾಕಿದ. ಬಿದುರಿನ ಒಂದು ಚಿಕ್ಕ ಕೊಳವೆಗೆ ಎಣ್ಣೆಯನ್ನು ಹಚ್ಚಿ ಗುದದ್ವಾರಕ್ಕೆ ಇಟ್ಟುಕೊಳ್ಳುವುದು. ನಂತರ ಹರಿಯುವ ನೀರಿನಲ್ಲಿ ಕುಕ್ಕರಗಾಲಿನಲ್ಲಿ ಕುಳಿತುಕೊಳ್ಳುವುದು. ನಿರ್ವಾತ ಪ್ರದೇಶವಿದ್ದ ನೆಟ್ಟಗರುಳಿಗೆ ನೀರನ್ನು ಎಳೆದುಕೊಳ್ಳುವುದು. ನಂತರ 'ನೌಲಿ' ಕ್ರಿಯೆಯನ್ನು ಮಾಡಿ ನೀರನ್ನು ಹೊರಕ್ಕೆ ಹಾಕುವುದು. ಅದರೆ ಜೊತೆಯಲ್ಲಿ ಮಲವೂ ಹೊರಕ್ಕೆ ಹೋಗುತ್ತದೆ. ಇದು ಹಠಯೋಗಿಗಳ ಮಾರ್ಗ. ಇದು ಸಾಮಾನ್ಯರಿಗೆ ಕಷ್ಟವಾಗುತ್ತದೆ. ಅಲ್ಲದೆ ರೋಗಿಗಳಿಗೆ ಇನ್ನೂ ಕಷ್ಟ. ಅದಕ್ಕೆ ಈಚೆಗೆ ವಿಜ್ಞಾನ ಇಷ್ಟು ಕಠಿಣವಲ್ಲದ ಒಂದು ಮಾರ್ಗವನ್ನು ಸೂಚಿಸಿತು. ಗುರುತ್ವಾಕರ್ಷಣೆಗೆ ವಿರುದ್ಧ ದಿಕ್ಕಿನಲ್ಲಿ ಹೋಗಿದ್ದ ನೀರು ಸಹಜವಾಗಿಯೇ ಗುರುತ್ವಾಕರ್ಷಣೆಗೆ ಒಳಪಟ್ಟು ರಭಸವಾಗಿ ಕೆಳಕ್ಕೆ ಬರುತ್ತದೆ. ಈ ತತ್ವವನ್ನು ಆಧರಿಸಿ ಆಧುನಿಕ ವೈದ್ಯ ವಿಜ್ಞಾನವು 'ಎನಿಮಾ' ವನ್ನು ಕಂಡುಕೊಂಡಿತು. ಅದನ್ನು ತುರ್ತುಪರಿಸ್ಥಿತಿಯಲ್ಲಿ ಉಪಯೋಗಿಸಲಾಗುತ್ತದೆ. ಕೆಲವು ವೇಳೆ ಕೆಲವರಲ್ಲಿ ಬರೀ ಬಾಯಿ ಮಾತ್ರ ಕೆಲಸ ಮಾಡುತ್ತಲೇ ಇರುತ್ತದೆ. ಆದರೆ ಗುದದ್ವಾರ ತನ್ನ ಕೆಲಸವನ್ನು ನಿಲ್ಲಿಸಿಬಿಡುತ್ತದೆ. ಅಂತಹ ಸಂದರ್ಭದಲ್ಲಿ ಹೊಟ್ಟೆ ಉಬ್ಬರಿಸಿಕೊಂಡು ಬಿಡುತ್ತದೆ. ಈ ತುರ್ತುಪರಿಸ್ಥಿತಿಯ ನಿವಾರಣೆಗಾಗಿ ಆಸ್ಪತ್ರೆ/ನರ್ಸಿಂಗ್ ಹೋಂಗಳಲ್ಲಿ ಎನಿಮಾ ಉಪಯೋಗಿಸುತ್ತಾರೆ. ಹೆಂಗಸರಿಗೆ ಹೆರಿಗೆಯ ಮುಂಚೆ ಎನಿಮಾ ಕೊಡುತ್ತಾರೆ. ಇವೆರಡು ಸನ್ನಿವೇಶದಲ್ಲಿ ಬಿಟ್ಟರೆ ಬೇರೆ ಯಾವಾಗಲೂ ಇದನ್ನು ಬಳಸುವುದಿಲ್ಲ. ಅಲ್ಲಿ ಉಪಯೋಗಿಸುವುದು ಸೋಪಿನ ನೀರು. ಹೆಚ್ಚು, ಎತ್ತರ, ಹೆಚ್ಚು ಒತ್ತಡ, ಇವೆಲ್ಲಾ ಹಿಂಸಾತ್ಮಕವೇ. ಇದು ತುರ್ತು ಪರಿಸ್ಥಿತಿಯನ್ನು ನಿಭಾಯಿಸಲು ಮಾತ್ರ ಸಹಕರಿಸುತ್ತದೆಯೇ ವಿನಃ ಬೇರೆಯ ಉಪಯೋಗಕ್ಕೆ ಬರುವುದಿಲ್ಲ.

ನಿಸರ್ಗೋಪಚಾರದಲ್ಲಿ ಎನಿಮಾವನ್ನು ಬಳಸುವ ಉದ್ದೇಶವೇ ಬೇರೆ. ನಾಗರೀಕ ಮಾನವನಿಗೆ ಬರುವ ಕಾಯಿಲೆಗಳಲ್ಲಿ ಮಲಬದ್ಧತೆಯು ಮುಖ್ಯ ಕಾರಣಗಳಲ್ಲಿ ಒಂದು ಎಂಬುದು ನಿಸರ್ಗೋಪಚಾರದ ನಿಲುವು.

'Accumulated, putrified, hardened, waste in the colon quite often, of many years duration places a great strain on the eliminatory organs disturbing especially liver and kidney functions....., of 20,000 operations I personally performed, I never found a single normal colon, and of 1,00,000 operations performed under my jurisdiction not even 6% were normal'-

‘ಅನೇಕ ವರ್ಷಗಳಿಂದ ಸಂಗ್ರಹಿತ, ಕೊಳೆಯುತ್ತಿರುವ, ಗಟ್ಟಿಯಾದ ಹೆಗ್ಗುರುಳಿನಲ್ಲಿನ ಮಲವು ಜೀರ್ಣಾಂಗಗಳ ಮೇಲಿನ ಹೊರೆಯನ್ನು ಹೆಚ್ಚಿಸಿ ಪಿತ್ತಜನಕಾಂಗ ಮತ್ತು ಮೂತ್ರಜನಕಾಂಗಗಳ ಶಕ್ತಿಯನ್ನು ಕುಂದಿಸುತ್ತದೆ. ನಾನು ಶಸ್ತ್ರಚಿಕಿತ್ಸೆ ನಡೆಸಿರುವ ಇಪ್ಪತ್ತು ಸಾವಿರ ಹೆಗ್ಗುರುಳಿನಲ್ಲಿ ಒಂದಾದರೂ ಸಹಜವಾಗಿರಲಿಲ್ಲ. ನನ್ನ ಅಧೀನದಲ್ಲಿ ನಡೆದ ಒಂದು ಲಕ್ಷ ಶಸ್ತ್ರ ಚಿಕಿತ್ಸೆಗಳಲ್ಲಿ ಶೇಕಡ ಆರು ಸಹ ಸಹಜವಾದ ಹೆಗ್ಗರುಳು ಸಿಕ್ಕಲಿಲ್ಲ’- Harvey Kellog M.D. Battlecreek Mich.

ಇದಕ್ಕಾಗಿ ನಿಸರ್ಗೋಪಚಾರಕರು ಅಹಿಂಸಾತ್ಮಕ ಎನಿಮಾವನ್ನು ಕಂಡುಕೊಂಡರು. ಅವರುಗಳಲ್ಲಿ ಆಚಾರ್ಯ ಲಕ್ಷಣಶರ್ಮರು ಪ್ರಮುಖರು.

**ಅಹಿಂಸಾತ್ಮಕ ಎನಿಮಾ:** ಇದಕ್ಕಾಗಿ ಸ್ಟೈಯಿನ್‌ಲೆಸ್ ಸ್ಟೀಲ್ ಅಥವಾ ಪ್ಲಾಸ್ಟಿಕ್ಕಿನ ಒಂದು ದೊಡ್ಡ ಲೋಟ, ಸುಮಾರು ೧/೪ ಲೀಟರ್‌ಗಿಂತ ಕಡಿಮೆ ನೀರು ಹಿಡಿಯುವ ಲೋಟ ವನ್ನು ಬಳಸಲಾಗುತ್ತದೆ. ಅದಕ್ಕೊಂದು ಪ್ಲಾಸ್ಟಿಕ್ಕಿನ ಟ್ಯೂಬ್ ಹಾಗೂ ನಾಜಲ್ ಇರುತ್ತದೆ. ಇದು ಮಾರುಕಟ್ಟೆಯಲ್ಲಿ ಎಲ್ಲ ಕಡೆಯೂ ದೊರೆಯುವುದಿಲ್ಲ. ಪ್ರಕೃತಿ ಪ್ರತಿಷ್ಠಾನ, ನಿಸರ್ಗ ಯೋಗಧಾಮ, ೨/೨೦೫೬, ೧೧ನೇ ಕ್ರಾಸ್, ಎಸ್.ಎಸ್. ಪುರಂ, ತುಮಕೂರು-೫೭೨ ೧೦೨. ಇಲ್ಲಿಯೂ ದೊರೆಯುತ್ತದೆ. ಬಹಳ ಸುಲಭದ ಬೆಲೆಯಲ್ಲಿ ದೊರೆಯುತ್ತದೆ. ಅದರ ಉಪಯೋಗ ಅಪಾರ. ಅಹಿಂಸಾತ್ಮಕ ಎನಿಮಾವನ್ನು ಬೇರೊಬ್ಬರ ಸಹಾಯವಿಲ್ಲದೆ ಅವರವರೇ ತೆಗೆದುಕೊಳ್ಳಬಹುದು. **ಒಂದು ಎನಿಮಾ ಕ್ಯಾನ್ ಮನೆಯಲ್ಲಿದ್ದರೆ ಮನೆಯಲ್ಲಿ ಒಬ್ಬ ವೈದ್ಯನಿದ್ದಂತೆ.**

ನಾಜಲ್‌ಅನ್ನು ಬೇವಿನ ಸೊಪ್ಪಿನ ನೀರಿನಿಂದ ತೊಳೆದು ಒಂದೇ ಕ್ಯಾನನ್ನು ಮನೆಯವರೆಲ್ಲಾ ಬಳಸಬಹುದು. ಇಲ್ಲ ದಿದ್ದರೆ ಒಬ್ಬೊಬ್ಬರು ಒಂದೊಂದನ್ನು ಬೇಕಾದರೂ ಇಟ್ಟು ಕೊಳ್ಳಬಹುದು. ಇದನ್ನು ಇಟ್ಟು ಕೊಳ್ಳಲು ಉತ್ತಮ ಜಾಗ ಅಟ್ಯಾಚ್ಡ್ ಬಾತ್‌ರೂಮ್‌ನ ಐದಡಿ ಎತ್ತರದಲ್ಲಿ ಒಂದು ಮೊಳೆ ಹೊಡೆದು ಸದಾ ಅಲ್ಲಿ ನೇತುಹಾಕಿರುವುದು.

**ವಿಧಾನ :** ಎನಿಮಾವನ್ನು ಕಕ್ಕಸ್ಸಿನಲ್ಲಾಗಲೀ, ಬಾತ್‌ರೂಮಿ ನಲ್ಲಾಗಲಿ ತೆಗೆದುಕೊಳ್ಳಬಹುದು. ಮೊದಲು ನಾಜಲ್‌ಗೆ ಯಾವುದಾದರೂ ಎಣ್ಣೆಯನ್ನು ಸವರಬೇಕು. ನಂತರ ತಣ್ಣೀರಿನ/ಉಗುರು ಬೆಚ್ಚಗಿನ ನೀರನ್ನು ಅದಕ್ಕೆ ಹಾಕಬೇಕು. ಎನಿಮಾ ಕ್ಯಾನನ್ನು ಬಲಗೈಲಿ ಹಿಡಿದುಕೊಂಡು ಗಾಳಿಯ ಗುಳ್ಳೆಗಳು ಹೊರಕ್ಕೆ ಹೋಗುವವರೆವಿಗೂ ನೀರನ್ನು ಬಿಡಬೇಕು. ತಕ್ಷಣ ಎಡಗೈಯ್ಯಿನ ಮಧ್ಯದ ಬೆರಳಿನಿಂದ ನಾಜಲ್ ಬಾಯಿಯನ್ನು ಅದುಮಿ ಹಿಡಿದುಕೊಳ್ಳಬೇಕು. ಗಾಳಿಯು ಮತ್ತೆ ಹೋಗದಿರಲೆಂದು ಈ ಕೆಲಸ. ಕೊಂಚ ಬಗ್ಗಿ ನಿಂತು ಕೊಂಡು ನಾಜಲ್ ತುದಿಯನ್ನು ೨"ನಷ್ಟು ದೂರ ಗುದದ್ವಾರದ ಒಳಕ್ಕೆ ನೂಕಬೇಕು. ಆಗ ಎಡಗೈ ಬಿಡುಗಡೆ ಯಾಗುತ್ತದೆ. ಅದರಲ್ಲಿ ಕ್ಯಾನನ್ನು ಹಿಡಿದುಕೊಂಡು ಅದನ್ನು ಮೇಲಕ್ಕೆ ಎತ್ತಿ ಹಿಡಿದುಕೊಳ್ಳಬೇಕು. ನಾಲ್ಕರಿಂದ ಐದು ನಿಮಿಷಗಳಲ್ಲಿ ನೀರೆಲ್ಲವೂ ನೆಟ್ಟಗರುಳಿನೊಳಕ್ಕೆ ಹೋಗು ತ್ತದೆ. ೧೦ ರಿಂದ ೧೫ ನಿಮಿಷಗಳ ನಂತರ ಟಾಯ್ಲೆಟ್ಟಿಗೆ ಹೋಗಬೇಕು. ನೀರಿನ ಜೊತೆ ತಡೆಹಿಡಿದಿದ್ದ ಮಲವೂ ಹೊರಕ್ಕೆ ಬರುತ್ತದೆ. ನೀರು ಒಳಕ್ಕೆ ಹೋದ ತಕ್ಷಣ ಹೊರಕ್ಕೆ ಬರಲು ಪ್ರಯತ್ನಿಸುತ್ತದೆ. ಕೊಂಚ ಹೆಚ್ಚು ಕಾಲ ನೀರನ್ನು ತಡೆಹಿಡಿದರೆ ನೀರು ಇನ್ನೂ ಒಳಕ್ಕೆ ಹೋಗಿ ದೊಡ್ಡ ಕರುಳಿನ ಕಡೆಯ ಭಾಗವನ್ನೂ ಸ್ವಚ್ಛಮಾಡುತ್ತದೆ. ತಕ್ಷಣವೇ ನೀರು ಹೊರಕ್ಕೆ ಬಂದರೆ ಹೆಚ್ಚು ಸ್ವಚ್ಛವಾಗುವುದಿಲ್ಲ. ಆದ್ದರಿಂದ ಕೊಂಚ ವೇಳೆಯ ನಂತರ ಕಕ್ಕಸ್ಸಿಗೆ ಹೋಗುವುದು ಉತ್ತಮ. ಅದಕ್ಕಾಗಿ ೧೦-೧೫ ನಿಮಿಷಗಳ ಕಾಲ ಟಿ.ವಿ.ಯ ಮುಂದಾಗಲಿ, ಪೇಪರನ್ನು ಓದುತ್ತಾಗಲಾಗಲಿ ಕಳೆಯುವುದು. ಮೊದಲ ಸಲ ಎನಿಮಾ ತೆಗೆದುಕೊಂಡೂ ನೀರು ತಕ್ಷಣ ಹೊರಕ್ಕೆ ಬರುತ್ತದೆ. ಕೊಂಚ ರೂಢಿಯ ನಂತರ ಕೊಂಚ ಹೆಚ್ಚು ಕಾಲ ತಡೆಹಿಡಿಯಬಹುದು.

ವಿ.ಸೂ.: ೧. ನೀರು ಒಳಕ್ಕೆ ಹೋಗದಿದ್ದರೆ ನಾಜಲ್‌ನ್ನು ಕೊಂಚ ಹಿಂದಕ್ಕೆ ಎಳೆದು ಮತ್ತೆ ಮುಂದಕ್ಕೆ ನೂಕಬೇಕು. ೨. ನಾಜಲ್ ತುದಿಗೆ ಮಲವೇನಾದರೂ ಸಿಕ್ಕಿಹಾಕಿಕೊಂಡಿದ್ದರೆ ನೀರು ಒಳಕ್ಕೆ ಹೋಗದ ಸಾಧ್ಯತೆ ಇದೆ. ಅಂತಹ ಸಂದರ್ಭ ದಲ್ಲಿ ನಾಜಲ್‌ನ್ನು ಹೊರಕ್ಕೆ ಎಳೆದುಕೊಂಡು ತೊಳೆದು ಮತ್ತೆ ಎನಿಮಾ ತೆಗೆದುಕೊಳ್ಳಲು ಪ್ರಯತ್ನಿಸಬೇಕು. ೩. ಕೆಲವರಿಗೆ ನೈಸರ್ಗಿಕ ಮಲವಿಸರ್ಜನೆಯಾದ ನಂತರ ಪೂರ್ಣವಾಗಿ ಹೋಗಿಲ್ಲವೆನಿಸುತ್ತದೆ. ಅಂತಹವರು ನೈಸರ್ಗಿಕ ಮಲವಿಸರ್ಜನೆಯ ನಂತರ ಎನಿಮಾ ತೆಗೆದು ಕೊಳ್ಳಬೇಕು. ೪. ಸಕಾಲದಲ್ಲಿ ನೈಸರ್ಗಿಕ ಮಲವಿಸರ್ಜನೆ ಯಾಗದವರು ಎನಿಮಾ ತೆಗೆದುಕೊಳ್ಳಬೇಕು. ೫. ತೀವ್ರ ಕಾಯಿಲೆಗಳಲ್ಲಿ ಮೊದಲ ಕೆಲಸ- ಎನಿಮಾ. ೬. ದೀರ್ಘ ಕಾಯಿಲೆಗಳಲ್ಲಿಯೂ ಬುದ್ಧಿವಂತಿಕೆಯಿಂದ ಎನಿಮಾ ಉಪಯೋಗಿಸಿಕೊಳ್ಳಬೇಕು.

-ಮುಂದುವರೆಯುತ್ತದೆ.



ಶಿವಗಂಗೆಯಲ್ಲಿರುವ ಶ್ರೀ ಲಕ್ಷ್ಮೀಪೀಠದಲ್ಲಿ ನಡೆದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಗಳವರಿಗೆ ಗುರುವಂದನೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಶ್ರೀ ಜ್ಞಾನಾನಂದಪುರಿ ಶ್ರೀಗಳು ಹಾಗೂ ಪೀಠದ ಪದಾಧಿಕಾರಿಗಳು ಉಪಸ್ಥಿತರಿದ್ದರು



ಹಿರೇಹಳ್ಳಿಯಲ್ಲಿ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆಯ ನೂತನ ಕಟ್ಟಡದ ಉದ್ಘಾಟನಾ ಸಮಾರಂಭದಲ್ಲಿ ಪೂಜ್ಯ ಶ್ರೀಗಳವರಿಗೆ ಗುರುವಂದನೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ಶಾಸಕ ಶ್ರೀ ಬಿ. ಸುರೇಶ್‌ಗೌಡ ಮೊದಲಾದವರು ಉಪಸ್ಥಿತರಿದ್ದರು



ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ರಸ್ತೆ ಸುರಕ್ಷತಾ ತರಬೇತಿ ಶಿಬಿರವನ್ನು ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಾರಿಗೆ ಅಧಿಕಾರಿಗಳು, ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು ಉಪಸ್ಥಿತರಿದ್ದರು



ತುಮಕೂರು ನಗರ ರೋಟರಿ ಕ್ಲಬ್‌ನ ವತಿಯಿಂದ ಶ್ರೀಮಠದಲ್ಲಿ ಪರಮಪೂಜ್ಯ ಶ್ರೀಗಳವರಿಗೆ ಗುರುವಂದನೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ಕಿರಿಯ ಶ್ರೀಗಳು, ಜಿಲ್ಲಾಧಿಕಾರಿಗಳು, ರೋಟರಿ ಕ್ಲಬ್‌ನ ಪದಾಧಿಕಾರಿಗಳು ಉಪಸ್ಥಿತರಿದ್ದರು.



ತುಮಕೂರು ಜಿಲ್ಲಾ ಹಾಗೂ ತಾಲ್ಲೂಕು ವೀರಶೈವ ನೌಕರರ ಕ್ಷೇಮಾಭಿವೃದ್ಧಿ ಸಂಘದವರು ಏರ್ಪಡಿಸಿದ್ದ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಸಿದ್ಧಗಂಗಾ ಕಿರಿಯ ಶ್ರೀಗಳು, ಹಿರೇಮಠದ ಶ್ರೀಗಳು, ಸಂಸದ ಶ್ರೀ ಜಿ.ಎಸ್. ಬಸವರಾಜ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ಸಿದ್ಧಗಂಗಾ ಪದವಿಪೂರ್ವ ಕಾಲೇಜಿನ ಪ್ರಸಕ್ತ ಸಾಲಿನ ಕ್ರೀಡಾ, ಸಾಂಸ್ಕೃತಿಕ ಹಾಗೂ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಉದ್ಘಾಟಿಸಿದರು.